ತಪ್ಪುವ ಪ್ರಪಂಚಿಯನೊಲ್ಲ ಕೂಡಲಸಂಗಮದೇವ. [ ೨೩೬ ] ಸತ್ಯವುಳ್ಳ ಭಂಡ
ವ ತುಂಬುವುದಯ್ಯಾ । ಸುಯಿಧಾನವಯ್ಯಾ, ಸುಯಿಧಾನವಯ್ಯಾ, ಮನ
ಧಾರೆವಟ್ಟಲು. । ಕೂಡ
ಲಸಂಗನ ಶರಣರು ಹಿಡಿಯದ ಭಂಡವನು । ಆರಾದಡಾಗಲಿ ಹೋಗಲೀಯರಯ್ಯಾ.
[ ೨೩೭ ] ದೇವಲೋಕ ಮತ್ರ್ಯಲೋಕವೆಂಬುದು ಬೇರಿಲ್ಲ ಕಾಣಿರೋ ! । ಸತ್ಯವ
ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ ಮತ್ರ್ಯಲೋಕ. । ಆಚಾರ
ವೆ ಸ್ವರ್ಗ, ಅನಾಚಾರವೆ ನರಕ. ಕೂಡಲಸಂಗಮದೇವಾ, ನೀವೆ ಪ್ರಮಾ
ಣು. [ ೨೩೮ ] ಪುಣ್ಯಪಾಪಂಗಳೆಂಬವು ತಮ್ಮ ಇಷ್ಟ ಕಂಡಿರೆ, । 'ಅಯ್ಯಾ
ಎಂದಡೆ ಸ್ವರ್ಗ, 'ಎಲವೊ ಎಂದಡೆ ನರಕ. । ದೇವಾ, ಭಕ್ತಾ, ಜಯಾ, ಜೀಯಾ ಎಂಬ
ನುಡಿಯೊಳಗೆ । ಕೈಲಾಸವೈದುವುದೆ ಕೂಡಲಸಂಗಮದೇವಾ. [ ೨೩೯ ] ಏನಿ ಬಂದಿ
ರಿ, ಹದುಳಿದ್ದಿರೆ ಎಂದಡೆ । ನಿಮ್ಮೆಸಿರಿ ಹಾರಿ ಹೋಹುದೆ? । ಕುಳ್ಳಿರೆಂದಡೆ ನೆಲ

ಕುಳಿಹೋಹುದೆ ? । ಒಡನೆ ನುಡಿದಡೆ ಸಿರ, ಹೊಟ್ಟೆಯೊಡೆವುದೆ? । ಕೊಡಲಿಲ್ಲದಿದ್ದ ಡೊಂದು ಗುಣವಿಲ್ಲದಿದ್ದಡೆ । ಮೂಗ ಕೊಯ್ವುದ ಮಾಬನೆ ಕೂಡಲಸಂಗಮದೇವಯ್ಯ?
[ ೨೪೦ ] ಸಂಸಾರದಲ್ಲಿ ಹುಟ್ಟಿ ಮತ್ತೊಂದ ಬಯಸಲೇಕಯ್ಯಾ । ನಗುವುದು ನುಡಿವುದು ಶಿವಭಕ್ತರೊಡನೆ. । ಸುಮ್ಮಾನ ಹಮ್ಮು ಬಿಮ್ಮಾಗಿರಲೇಕಯ್ಯಾ । ಅಭ್ಯಾಸೇನ ವಿಹೀನಸ್ಯ ತಸ್ಯ ಜನ್ಮ ನಿರರ್ಥಕಂ । ಗುರುಣಾಪಿ ಸಮಂ ಹಾಸ್ಯಂ ಕರ್ತವ್ಯಂ ಕುಟಿಲಂ ವಿನಾ । ನಮ್ಮ ಕೂಡಲಸಂಗನ ಶರಣರೊಡನೆ ಮನದೆರೆದು ಮಾತನಾಡುವುದಯ್ಯಾ.
[ ೨೪೧ ] ಭಕ್ತಿಯೆಂಬ ನಿಧಾನವ ಸಾಧಿಸುವಡೆ । ಶಿವಪ್ರೇಮವೆಂಬ ಅನಂಜನವನೆಚ್ಚಿಕೊಂಬುದು, । ಭಕ್ತನಾದವಂಗೆ ಇದೇ ಪಥವಾಗಿರಬೇಕು. । ನಮ್ಮ ಕೂಡಲಸಂಗನ ಶರಣರ ಅನುಭಾವ ಗಜವೈದ್ಯ.
[ ೨೪೨ ] ಕಂಡ ಭಕ್ತರಿಗೆ ಕೈಮುಗಿಯುವಾತನೆ ಭಕ್ತ, । ಮೃದುವಚನವೆ ಸಕಲ ಜ

ಪಂಗಳಯ್ಯಾ. । ಮೃದುವಚನವೆ ಸಕಲ ತಪಂಗಳಯ್ಯಾ. । ಸದುವಿನಯವೆ ಸದಾಶಿ
ವನ ಒಲುಮೆಯಯ್ಯಾ. । ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ. [ ೨೪೩ ] ಇ
ತ್ತ ಬಾರಯ್ಯಾ, ಇತ್ತ ಬಾರಯ್ಯಾ ಎಂದು । ಭಕ್ತರೆಲ್ಲರೂ ಕೂರ್ತು ಹತ್ತಿರೆ ಕರೆ
ವುತ್ತಿರಲು, । ಮತ್ತೆ ಕೆಲಕ್ಕೆ ಸಾರ್ದು, ಶರಣೆಂದು ಹಸ್ತ ಬಾಯನೆ ಮುಚ್ಚಿ,
ಕಿರಿದಾಗಿ ಭೃತ್ಯಾಚಾರವ ನುಡಿದು, । ವಿನಯ ತದ್ಧ್ಯಾನವುಳ್ಳ
ಡೆ ಎತ್ತಿಕೊಂಬನಯ್ಯಾ. । ಕೂಡಲಸಂಗಮದೇವ ಪ್ರಮಥರ ಮುಂ
ದೆ [ ೨೪೪ ] ಭಕ್ತ ಭಕ್ತನ ಮನೆಗೆ ಬಂದಡೆ, ಭೃತ್ಯಾಚಾರವ ಮಾಡ
ಬೇಕು. । ಕರ್ತನಾಗಿ ಕಾಲ ತೊಳೆಸಿಕೊಂಡಡೆ । ಹಿಂದೆ ಮಾಡಿದ ಭಕ್ತಿಗೆ ಹಾ
ನಿ. । ಲಕ್ಕಗಾವುದ ದಾರಿಯ ಹೋಗಿ । ಭಕ್ತನು ಭಕ್ತನ ಕಾಂಬುದು ಸದಾಚಾರ.
ಅಲ್ಲಿ ಕೂಡಿ ದಾಸೋಹವ ಮಾಡಿದಡೆ । ಕೂಡಿಕೊಂಬನು ನಮ್ಮ ಕೂಡಲ

ಸಂಗಯ್ಯ. [ ೨೪೫ ] ದಯವಿಲ್ಲದ ಧರ್ಮವದೇವುದಯ್ಯಾ । ದಯವೇ ಬೇ
ಕು ಸರ್ವಪ್ರಾಣಿಗಳೆಲ್ಲರಲ್ಲಿ. । ದಯವೇ ಧರ್ಮದ ಮೂಲವಯ್ಯಾ. । ಕೂಡಲಸಂಗ
ಯ್ಯನಂತಲ್ಲದೊಲ್ಲನಯ್ಯಾ. [ ೨೪೬ ] ತನಗೆ ಮುನಿವರಿಗೆ ತಾ ಮುನಿಯಲೇಕ
ಯ್ಯಾ । ತನಗಾದ ಆಗೇನು ಅವರಿಗಾದ ಚೇಗೆಯೇನು । ತನುವಿನ ಕೋ
ಪ ತನ್ನ ಹಿರಿಯತನದ ಕೇಡು. । ಮನದ ಕೋಪ ತನ್ನ ಅರಿವಿನ
ಕೇಡು. । ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ । ನೆರೆಮ
ನೆಯ ಸುಡದು ಕೂಡಲಸಂಗಮದೇವಾ. [ ೨೪೭ ] ಅರ್ಥಕ್ಕೆ ತಪ್ಪಿದಡೇನು,
ಪ್ರಾಣಕ್ಕೆ ತಪ್ಪಿದಡೇನು, । ಅಭಿಮಾನಕ್ಕೆ ತಪ್ಪಿದಡೇನು । ಶರಣರು ಶರಣರಲ್ಲಿ ಗುಣ
ವನರಸುವರೆ । ಕೂಡಲಸಂಗನ ಶರಣರು ನೊಂದು ಸೈರಿಸಬೇಕು. [ ೨೪೮ ]
ಕಾಣದ ಶಾವಿನಲಿ ಜರೆದರೆಂದಡೆ ಕೇಳಿ ಪರಿಣಾಮಿಸ

ಬೇಕು. । ಅದೇನು ಕಾರಣ । ಕೊಳ್ಳದೆ ಕೊಡದೆ ಅವರಿಗೆ ಸಂತೋಷವಹುದಾಗಿ ! ।
ಎನ್ನ
ಮನದ ತದ್ವೇಷವಳಿದು । ನಿಮ್ಮ ಶರಣರಿಗೆ ಶರಣೆಂಬುದ ಕರುಣಿಸು, । ಕೂಡಲಸಂ
ಗಮದೇವಾ. [ ೨೪೯ ] ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯಾ, । ಒರೆಗೆ
ಬಣ್ಣಕ್ಕೆ ತಂದೆನ್ನ ಪುಟವನಿಕ್ಕಿ ನೋಡಯ್ಯಾ, । ಕಡಿಹಕ್ಕೆ ಬಡಿಹಕ್ಕೆ ತಂ
ದೆನ್ನ ಕಡೆಯಾಣಿಯ ಮಾಡಿ, । ನಿಮ್ಮ ಶರಣರ ಪಾದಕ್ಕೆ ತೊಡಿಗೆ
ಯ ಮಾಡಿ ಸಲಹು । ಕೂಡಲಸಂಗಮದೇವಾ. [ ೨೫೦ ] ವೇದಾದಿ ನಾಮ ನಿ
ರ್ನಾಮ ಮಹತ್ತತ್ತ್ವಂ ಮದೀಶ್ವರಃ । ಗುರೂಕ್ತಮಂತ್ರಮಾರ್ಗೇಣ
ಇಷ್ಟಲಿಂಗಂ ತು ಶಾಂಕರಿ । ಎಂದುದಾಗಿ, ವಚನಪಾತಕವೆನ್ನ, ವಚನದೋಷಂಗ
ಳೆನ್ನ, । ಕಾಡಿ ಕಾಡಿ ಕೆಡಿಸಿಹವೆನ್ನ ! । ಕೂಡಲಸಂಗಮದೇವಾ 'ಅಹಂ ಎಂಬ ಅ
ಹಂಕಾರವೆನ್ನ. [ ೨೫೧ ] ಅವರಿವರೆನ್ನದೆ ಚರಣಕ್ಕೆರಗಲು ಅಯ್ಯತ

ನವೇರಿ, । ಬಿಬ್ಬನೆ ಬಿರಿವೆ ನಾನು, ಕೆಚ್ಚು ಬೆಳುತ್ತಯ್ಯಾ. । ಆ ಕೆಚ್ಚಿಂಗೆ ಕಿಚ್ಚ
ನಿಕ್ಕಿ ಸುಟ್ಟು ಬೆಳ್ಳುಕನ ಮಾಡಿ, । ಬೆಳುಗಾರದಂತೆ ಮಾಡು ಕೂಡಲಸಂಗಮದೇವಾ.
[ ೨೫೨ ] ನಡೆಯ ಕಂಡಾ ನಂಬಿ, ನುಡಿಯೆಲ್ಲಾ ಉಪಚಾರ ! । ಮಿಗಿಲೊಂದು ಮಾತು
ಬಂದಡೆ ಸೈರಿಸಲಾರೆನು. । ತುಯ್ಯಲಾದಡೆ ಉಂಬೆ, ಹುಯ್ಯಲಾದಡೆ ಓಡು
ವೆ, । ಆಳು ಬೇಡಿದಡೆ ಆಳ್ದನೇನನೀವನಯ್ಯಾ । ಆಳಾಗಿ ಹೊಕ್ಕು ಅರಸಾ
ಗಿ ನಡೆದಡೆ, । ಆಳಿಗೊಂಡಿತೆನ್ನ ಕೂಡಲಸಂಗನ ಭಕ್ತಿ [ ೨೫೩ ] ಇ
ರಿಸಿಕೊಂಡು ಭಕ್ತರಾದರೆಮ್ಮವರು, । ತರಿಸಿಕೊಂಡು ಭಕ್ತರಾದರೆ
ಮ್ಮವರು, । ಕೊರೆಸಿಕೊಂಡು ಭಕ್ತರಾದರೆಮ್ಮವರು, । ಜರಿಸಿಕೊಂಡು ಭಕ್ತರಾದರೆ
ಮ್ಮವರು. । ಕೂಡಲಸಂಗನ ಶರಣರಿಗೆ ಮುಳಿಸ ತಾಳಿ । ಎನ್ನ ಭಕ್ತಿ ಅರೆಯಾಯಿ
ತ್ತು. [ ೨೫೪ ] ಮನಕ್ಕೆ ನಾಚದ ವಚನ, ವಚನಕ್ಕೆ ನಾಚದ ಮನ ! । ಕುಂದು-ಹೆಚ್ಚ ನು

ಚ್ಚ ನುಡಿವೆ. । ಒಂದು ಮಾತಿನ ಗೆಲ್ಲಕ್ಕೆ ಹಿಡಿದು ಹೋರುವೆ, । ಕೂಡಲಸಂಗನ ಶರಣರ
ಎನ್ನಾಳ್ದರೆಂಬೆ. [ ೨೫೫ ] ಇಲ್ಲವೆಯ ಮೇಲೆ ಕಂಚೊಡೆದಂತೆ ಬಡ ಮನವೆನ್ನ
ಕಾಡಿಹಿತಯ್ಯಾ, । ಮತಿಲ್ಲದ ಮರುಳ ನಾನಯ್ಯಾ, । ಭಕ್ತಿಲ್ಲದ ಬಡವ ನಾನು.
ನಿಮ್ಮ ನೆನಹವಿಲ್ಲದೆ ನಿರ್ಭಾಗ್ಯನಾದೆ, । ಎನಗೆ ನೀ ಕರುಣಿಸು ಕೂಡಲ
ಸಂಗಮದೇವಾ [ ೨೫೬ ] ಲಿಂಗವ ನಚ್ಚದೀ ಮನವು, ಜಂಗಮವ ನಂಬ
ದೀ ಮನವು,। ಕೂಪರ ಕಂಡಡೆ ಒಲ್ಲದೀ ಮನವು. ಈ ಮನದ ಭ್ರ
ಮೆಯನೆಲ್ಲವ ಮರೆಸಿ, । ನಿಮ್ಮ ಶರಣರಿಗೆ ಶರಣೆಂಬುದ ಕರುಣಿ
ಸು । ಕೂಡಲಸಂಗಮದೇವಾ [ ೨೫೭ ] ಅಶನ ಕುಂದದು, ವ್ಯಸನ ಮಾಣದು, । ಆರ
ತವಡಗದು, ಬೆವಹಾರ ಮಾಣದು. । ಮಜ್ಜನಕ್ಕೆರೆವೆನಯ್ಯಾ:ಕಾಯವಿಕಾರಿಯಾ
ನು. । ಮಜ್ಜನಕ್ಕೆರೆವೆನಯ್ಯಾ:ಜೀವವಿಕಾರಿಯಾನು. । ಮಜ್ಜನಕ್ಕೆರೆವೆನಯ್ಯಾ:

ಶರಣನಲ್ಲ, ಲಿಂಗೈಕ್ಯನಲ್ಲ. । ಕೂಡಲಸಂಗಮದೇವರಲ್ಲಿ । ಅಂತರಬೆಂತರ ನಾ
ನಯ್ಯಾ. [ ೨೫೮ ] ಕುದುರನೇಸ ತೊಳೆದಡೆಯೂ ಕೆಸರು ಮಾಬುದೆ । ಎನ್ನ ಕಾ
ಯದಲುಳ್ಳ ಅವಗುಣಂಗಳ ಕಳೆದು ಕೃಪೆಯ ಮಾಡಯ್ಯಾ। ಕಂಬಳಿಯಲ್ಲಿ ಕಣ
ಕವ ನಾದಿದಂತೆ ಕಾಣಿರೇ ಎನ್ನ ಮನ. । ಕೂಡಲಸಂಗಮದೇವಾ, ನಿಮ
ಗೆ ಶರಣೆಂದು ಶುದ್ಧ ಕಾಣಯ್ಯಾ. [ ೨೫೯ ] ಕಾಮಧೇನು ನಿಮ್ಮ ಸಾರಿರಲು ಪ
ರರ ಬೇಡಲಾರೆನಯ್ಯಾ. ನಿಮ್ಮುವ ಪೂಜಿಸಿ। ಭವಬಂಧನ ಬಿಡ
ದೇಕಯ್ಯಾ ಹಿಂದಣ ಜನ್ಮದ ಚಿಹ್ನೆ ಬಿಡದನ್ನಕ್ಕ ನಿಮ್ಮ ಪೂಜಿಸಿ
ಏವೆನಯ್ಯಾ ಎನ್ನ ಮನದ ಅವಗುಣವ ಕಳೆದು ನಿಮ್ಮ ಶರಣರಿಗೆ ಶರಣೆಂ
ಬುದ । ಕರುಣಿಸು, ಕೂಡಸಂಗಮದೇವಾ. [ ೨೬೦ ] ದುವ್ರ್ಯಸನಿ ದುರಾಚಾರಿ ಎಂ
ದೆನಿಸದಿರಯ್ಯಾ, ಎನ್ನ. ಲಿಂಗವ್ಯಸನಿ ಜಂಗಮಪ್ರೇಮಿ । ಎಂದೆನಿಸಯ್ಯಾ

‘ಅವಶ್ಯಮನುಭೋಕ್ತವ್ಯಂ’ ಎಂದೆನಿಸದಿರಯ್ಯಾ ಕೂಡಲಸಂಗಮದೇವಾ, । ಸೆರಗೊಡ್ಡಿ ಬೇಡುವೆ
[ ೨೬೧ ] ಧೃತಿಗೆಟ್ಟು ಅನ್ಯರ ಬೇಡದಂತೆ, । ಮತಿಗೆಟ್ಟು ಪರರುವ ಹೊಗಳದಂತೆ, । ಪರಸತಿ
ಯರ ರತಿಗೆ ಮನ ಹಾರದಂತೆ, । ಶಿವಪಥವೊಲ್ಲದವರೊಡನಾಡದಂತೆ,। ಅನ್ಯಜಾತಿಯ ಸಂ
ಗವ ಮಾಡದಂತೆ, । ಎನ್ನ ಪ್ರತಿಪಾಲಿಸು, ಕೂಡಲಸಂಗಮದೇವಾ. [ ೨೬೨ ] ಮತ್ತೊಂದ
ಕಾಣ
ದೆ, ಮತ್ತೊಂದ ಕೇಳದೆ, । ನಿಮ್ಮ ಶರಣರ ಪಾದವಲ್ಲದೆ ಅನ್ಯವಿಷಯ
ಕ್ಕೆಳಸದಂತೆ । ಇರಿಸಯ್ಯಾ, ಕೂಡಲಸಂಗಮದೇವಾ. [ ೨೬೩ ] ಮತಿಮಂದನಾ
ಗಿ ಗತಿಯ ಕಾಣದೆ ಇದ್ದೆನಯ್ಯಾ : । ಹುಟ್ಟುಗುರುಡನ ಕೈಯ ಕೋಲ ಕೊ
ಟ್ಟು ನಡೆಸುವಂತೆ । ನಡೆಸಯ್ಯಾ ಎನ್ನ. ನಿಮ್ಮ ಅಚ್ಚ ಶರಣರ ಒಕ್ಕುದ ಮಿಕ್ಕುದ
ನಚ್ಚಿಸು, । ಮಚ್ಚಿಸು,। ಕೂಡಲಸಂಗಮದೇವಾ [ ೨೬೪ ] ಕಾಣದುದನೆಲ್ಲವ ಕಾಣಲಾರೆನ
ಯ್ಯಾ, । ಕೇಳದುದನೆಲ್ಲವ ಕೇಳಲಾರೆನಯ್ಯಾ. । ದ್ರೋಹವಿಲ್ಲ ಎಮ್ಮ ಶಿವನಲ್ಲಿ, ಸೀಮೆ

ಸಂಗಮದೇವ. [ ೨೬೭ ] ಎತ್ತು ತೊತ್ತಾಗಿ, ಭೃತ್ಯನಾಗಿ ಎಂದಿಪ್ಪೆನಯ್ಯಾ. । ನಿಮ್ಮ
ವರ ಮನೆಯಲು ಕೂಡಲಸಂಗಮದೇವಾ, । ಲಿಂಗಜಂಗಮದ ಲೆಂಗಿಯಾಗಿ [ ೨೬೮ ]
ಕಾಣಬಹುದೆ ಪರುಷದ ಗಿರಿ ಅಂಧಕಂಗೆ । ಮೊಗೆಯಬಹುದೆ ರಸದ ಬಾವಿ ನಿರ್ಭಾ
ಗ್ಯಂಗೆ । ತೆಗೆಯಬಹುದೆ ಕಡವರವು ದಾರಿದ್ರಂಗೆ । ಕರೆಯಬಹುದೆ ಕಾಮಧೇ
ನು ಅಶುದ್ಧಂಗೆ । ಹೊನ್ನ ಹುಳುವ ಕಂಡು ನರಿ ತನ್ನ ಬಾಲವ। ಹುಣ್ಣು ಮಾ
ಡಿಕೊಂಡಡೆ ಹೋಲಬಹುದೆ । ಎನ್ನೊಡೆಯ ಕೂಡಲಸಂಗನ ಶ
ರಣರನು । ಪುಣ್ಯವಿಲ್ಲದೆ ಕಾಣಬಹುದೆ [ ೨೬೯ ] ಎಂತಕ್ಕೆ ಎಂತಕ್ಕೆ ನಾ ನಿ
ಮ್ಮ ದೇವರೆಂದರಿದೆನು, ಇಂತಾಗಿ ನೀವೆನ್ನನಾರೆಂದರಿರಿ. । ನಂಬಲರಿಯೆ,
ನಂಬಿಸಲರಿಯೆ. ಒಲಿಯಲರಿಯೆ, ಒಲಿಸಲರಿಯೆ. ಯಥಾ ಭಾವಸ್ತಥಾ । ಲಿಂ
ಗಂ ಸತ್ಯಂ ಸತ್ಯಂ ನ ಸಂಶಯಃ ಯಥಾ ಭಕ್ತಿಸ್ತಥಾ ಸಿದ್ಧಿ:ಸತ್ಯಂ
ಸತ್ಯಂ ನ ಸಂಶಯಃ ಎಂದುದಾಗಿ, ಕೂಡಲಸಂಗಮದೇವಾ, ಕೇಳಯ್ಯಾ ಕೋಟಿ
೮೮ ಕೋಟಿ ವರು

ಷ ಕೋಟಲೆಗೊಂಡೆನಯ್ಯಾ. [ ೨೬೭ ] ಅರಿಸಿನವನೆ ಮಿಂದು, ಹೊಂದೊಡಿಗೆಯ
ನೆ ತೊಟ್ಟು, । ಪುರುಷನ ಒಲವಿಲ್ಲದ ಲಲನೆಯಂತೆ ಆನಿದ್ದೇನಯ್ಯಾ. । ವಿಭೂತಿಯನೆ
ಹೂ
ಸಿ, ರುದ್ರಾಕ್ಷಿಯನೆ ಕಟ್ಟಿ, । ಶಿವ ನಿಮ್ಮ ಒಲವಿಲ್ಲದಂತೆ ಆನಿದ್ದೇನಯ್ಯಾ. । ಕೆಟ್ಟು
ಬಾಳುವರಿಲ್ಲ ಎಮ್ಮವರ ಕುಲದಲ್ಲಿ, । ನೀನೊಲಿದಂತೆ ಸಲಹಯ್ಯಾ,
ಕೂಡಲಸಂಗಮದೇವಾ. [ ೨೬೮ ] ಉದಯಾಸ್ತಮಾನವೆನ್ನ
ಬೆಂದ ಬಸುರಿಂಗೆ ಕುದಿಯಲಲ್ಲದೆ, ನಿಮ್ಮ ನೆನೆಯಲು
ತೆರಹಿಲ್ಲಯ್ಯಾ. ಎಂತೋ ಲಿಂಗ ತಂದೆ, ಎಂತಯ್ಯಾ ಎನ್ನ ಪೂರ್ವಲಿಖಿ
ತ । ಬೆರಣಿಯನಾಯಲಲ್ಲದೆ ಅಟ್ಟುಣ್ಣ ತೆರಹಿಲ್ಲೆನಗೆ, ನೀ ಕರುಣಿಸು,
ಕೂಡಲಸಂಗಮದೇವಾ. [ ೨೬೯ ] ತಾಮಸ ಮುಸುಕಿ ಕಂಗಳ ಕೆಡಿಸಿತ್ತೆ

ನ್ನ, ಭಕ್ತಿ. । ಕಾಮವೆಂಬ ಅಗ್ನಿಗೆ ಮುರಿದಿಕ್ಕಿತ್ತೆನ್ನ, ಭಕ್ತಿ. । ಉದರಕ್ಕೆ ಕುದಿಕುದಿದು ಮುಂದುಗೆಡಿಸಿತ್ತೆನ್ನ, ಭಕ್ತಿ.। ಇದಿರನಾಶ್ರುಸಲು ಹೋಯಿತ್ತೆನ್ನ, ಭಕ್ತಿ. । ಹೆಣಮೂಳನು ನಾನು ಕೂಡಲಸಂಗಮದೇವಾ,। ಕ್ಷಣ ಹದುಳವಿರದೆ ಬಾಯ ಟೊಣೆದು ಹೋಲತ್ತೆನ್ನ, ಭಕ್ತಿ. [ ೨೭೦ ]

ಏನಿದ್ದಡೇನಿದ್ದಡೊಲ್ಲದು ನಿಮ್ಮನುಭಾವಕ್ಕೆನ್ನ ಮನವು. । ಡಂಬಕನೆಂಬವ ನಾನು ಕಂಡಯ್ಯಾ, । ಕೂಡಲಸಂಗಮದೇವರ ಪೂಜಿಸಿ ಮಾನವರಾಸೆ ಬಿಡದಾಗಿ. [ ೨೭೧ ]

ಬೆಲ್ಲವ ತಿಂದ ಕೋಡಗದಂತೆ ಸಿಹಿಯ ನೆನೆಯದಿರಾ, ಮನವೆ, । ಕಬ್ಬ ತಿಂದ ನರಿಯಂತೆ ಹಿಂದಕ್ಕೆಳಸದಿರಾ, ಮನವೆ. । ಗಗನವನಡರಿದ ಕಾಗೆಯಂತೆ ದೆ

ಸೆಗೆ ಹಂಬಲಿಸದಿರಾ, ಮನವೆ. । ಕೂಡಲಸಂಗನ ಶರಣರ ಕಂಡು ಲಿಂಗವೆಂದೆ
ನಂಬು, ಮನವೆ. [ ೨೭೨ ]  ಒಡೆಯರ ಕಂಡಡೆ ಕಳ್ಳನಾಗದಿರಾ, ಮನವೆ. ।  ಭವದ
ಬಾರಿಯ ತಪ್ಪಿಸಿಕೊಂಬಡೆ ನೀನು ನಿಯತನಾಗಿ, ಭಯಭರಿತನಾಗಿ, ।  ಅಹಂ
ಕಾರಿಯಾಗದೆ ಶರಣೆನ್ನು, ಮನವೆ. ಕೂಡಲಸಂಗನ ಶರಣರಲ್ಲಿ
ಭಕ್ತಿಯ ನೋನುವಡೆ । ಕಿಂಕಿಲನಾಗಿ ಬದುಕು, ಮನವೆ. [ ೨೭೩ ] ಕೋ
ಟ್ಯನುಕೋಟಿ ಜಪವ ಮಾಡಿ ಕೋಟಲೆಗೊಳ್ಳಲದೇಕೆ ಮನವೆ । ಕಿಂಚಿ
ತು ಗೀತವೊಂದನಂತಕೋಟಿ ಜಪ. । ಜಪವೆಂಬುದೇಕೆ, ಮನವೆ । ಕೂಡ
ಲಸಂಗನ ಶರಣರ ಕಂಡು, । ಆಡಿ ಹಾಡಿ ಬದುಕು ಮನವೆ.  [ ೨೭೪ ] ಮನ
ವೆ, ನಿನ್ನ ಜನ್ಮದ ಪರಿಭವವ ಮರೆದೆಯಲ್ಲಾ, ಮನವೆ ! ಲಿಂಗವ ನಂಬು ಕಂಡಾ,
ಮನವೆ ! । ಜಂ
ಗಮವ ನಂಬು ಕಂಡಾ, ಮನವೆ ! । ಕೂಡಲಸಂಗಮದೇವರ ಬಿಡದೆ ಬೆಂ

ಬತ್ತು ಕಂಡಾ, ಮನವೆ ! [ ೨೭೫ ] ಸುರರ ಬೇಡಿದಡಿಲ್ಲ, ನರರ ಬೇಡಿದಡಿಲ್ಲ ಬರೆ
ದ ಧೃತಿಗೆಡಬೇಡ ಮನವೆ ! । ಆರನಾದಡೆಯೂ ಬೇಡಿ ಬೇಡಿ ಬರಿದೆ ಧೃತಿಗೆಡಬೇಡ
ಮನವೆ ! ಕೂಡಲಸಂಗಮದೇವನಲ್ಲದೆ, ಆರ ಬೇಡಿದಡಿಲ್ಲ ಮ
ನವೆ ! [ ೨೭೬ ] ಆಡಿ ಅಳುಪದಿರಾ, ಲೇಸಮಾಡಿ ಮರುಗದಿರಾ, ಎ
ಲೆ ಮನವೆ. । ಕೂಡಿ ತಪ್ಪದಿರಾ, ಬೇಡಿದವರಿಗಿಲ್ಲೆನ್ನದಿರು ಕಂ
ಡಾ. । ನಾಡ ಮಾತು ಬೇಡ, ಸೆರಗೊಡ್ಡಿ ಬೇಡು। ಕೂಡಲಸಂಗ
ನ ಶರಣರ. [ ೨೭೭ ] ಹೃದಯ ಕತ್ತರಿ, ತುದಿನಾಲಗೆ ಬೆಲ್ಲೇಂ ಭೋ !
ಆಡಿಹೆನು ಏಂ ಭೋ, ಹಾಡಿಹೆನು ಏಂ ಭೋ ! । ನಿಚ್ಚ ನಿಚ್ಚ ಶಿವರಾತ್ರಿಯ ಮಾಡಿಹೆನು
ಏಂ ಭೋ ! । ಆನು ಎನ್ನಂತೆ, ಮನ ಮನದಂತೆ, । ಕೂಡಲಸಂಗಮದೇವ
ತಾನು ತನ್ನಂತೆ [ ೨೭೮ ] ಒಳ್ಳಿಹ ಮೈಲಾರನ ಒಳಗೆಲ್ಲ ಸಣಬು, । ಹೊರಗ

ಣ ಬಣ್ಣ ಕರ ಲೇಸಾಯಿತ್ತಯ್ಯಾ. । ಶ್ವಾನನ ನಿದ್ರೆ, ಅಜ್ಞಾನಿಯ ತಪದಂತೆ ಆತ್ತ
ಯ್ಯಾ ಎನ್ನ ಮತಿ, । ಕೂಡಲಸಂಗಮದೇವಾ. [ ೨೭೯ ] ಲೋಕೋಪಚಾರಕ್ಕೆ ಮ
ಜ್ಜನಕ್ಕೆರೆವೆನಯ್ಯಾ. । ಮನದ ತಾಮಸ ಬಿಡದು, ಮನದ ಕಪಟ ಬಿಡದು, । ಶಿವ
ಶರಣೆಂಬುದು ಅಳವಡದಯ್ಯಾ. । ಎನ್ನ ಮನದಲ್ಲಿ ಎರಡು
ಳ್ಳನ್ನಕ್ಕ । ಕೂಡಲಸಂಗಮದೇವನೆಂತೊಲಿವ [ ೨೮೦ ] ಮಜ್ಜನ
ಕ್ಕೆರೆವೆನಲ್ಲದಾನು, ಸಜ್ಜನವೆನ್ನಲ್ಲಿಲ್ಲಯ್ಯಾ ! । ಎನ್ನಲ್ಲೇ
ನನರಸುವೆ । ನಂಬಿಯೂ ನಂಬದ ಡಂಬಕ ನಾನಯ್ಯಾ. । ಹಾ
ವ ತೋರಿ ಹವಿಯ ಬೇಡುವಂತೆ- । ಕೂಡಲಸಂಗಮದೇವಾ. [ ೨೮೧ ] ಕೆಲಕ್ಕೆ ಶುದ್ಧ
ನಾದೆನಲ್ಲದೆ, ಎನ್ನ ಮನಕ್ಕೆ ಶುದ್ಧನಾಗೆನೇಕಯ್ಯಾ । ಕೈಮುಟ್ಟಿ ಪೂಜಿಸು
ವಡೆ, ಎನ್ನ ಕೈ ಶುದ್ಧವಲ್ಲಯ್ಯಾ. । ಮನಮುಟ್ಟಿ ಪೂಜಿಸುವಡೆ, ಎನ್ನ ಮನ

ಶುದ್ಧವಲ್ಲಯ್ಯಾ. । ಭಾವ ಶುದ್ಧವಾದಡೆ, ಕೂಡಲಸಂಗಯ್ಯನು । ಇತ್ತ
ಬಾಯೆಂದತ್ತಿಕೊಳ್ಳನೇಕಯ್ಯಾ ? [ ೨೮೨ ] ಕುಲಮದಕ್ಕೆ ಹೋರಿ ಜಂಗಮಭೇ
ದವ ಮಾಡುವೆ, ಫಲವೇನು । ನಿತ್ಯಲಿಂಗಾರ್ಚನೆ ಪ್ರಾಯಶ್ಚಿತ್ತ. । ಛಲಮದಕ್ಕೆ
ಹೋರಿ ಲಿಂಗಭೇದವ ಮಾಡುವೆ, । ಜಂಗುಳಿಯ ಕಾವ ಗೋವ ಹಲ
ವು ಪಶುವ ನಿವಾರಿಸುವಂತೆ । ತನು ಭಕ್ತನಾುತ್ತು, ಎನ್ನ ಮನ ಭ
ವಿ । ಕೂಡಲಸಂಗಮದೇವಾ. [ ೨೮೩ ] ಲಿಂಗದಲ್ಲಿ ಕಠಿಣವುಂ
ಟೆ ಜಂಗಮದಲ್ಲಿ ಕುಲವುಂಟೆ । ಪ್ರಸಾದದಲ್ಲಿ ಆರುಚಿ
ಯುಂಟೆ । ಈ ತ್ರಿವಿಧದಲ್ಲಿ ಭಾವಭೇದವನರಸುವೆನು, । ಕೂಡಲಸಂಗಮ
ದೇವಾ, ಧಾರಾವಟ್ಟಲೆನ್ನ ಭಕ್ತಿ [ ೨೮೪ ] ಲೌಕಿಕರ ಕಂಡು ಆಡುವೆ, ಹಾ
ಡುವೆ. । ತಾರ್ಕಿಕರ ಕಂಡು ಆಡುವೆ, ಹಾಡುವೆ. । ಸಹಜಗುಣವೆ

ನ್ನಲಿಲ್ಲಯ್ಯಾ, ನಿಜಭಕ್ತಿಯೆನಗಿಲ್ಲ, ತಂದೆ. । ಏಕೋಭಾವ ಎನಗುಳ್ಳಡೆ, ಏ
ಕೆ ನೀ ಕರುಣಿಸೆ । ಕೂಡಲಸಂಗಮದೇವಾ. [ ೨೮೫ ] ಓತಿ ಬೇಲಿವರಿವಂ
ತೆ ಎನ್ನ ಮನವಯ್ಯಾ, । ಹೊತ್ತಿಗೊಂದು ಪರಿನಪ್ಪ ಗೋಸುಂಬೆಯಂತೆನ್ನ ಮನವು,
ಬಾವುಲ ಬಾಳುವೆಯಂತೆನ್ನ ಮನವು. । ನಡುವಿರುಳೆದ್ದ ಕುರುಡಂಗೆ ಅ
ಗುಸೆಯಲ್ಲಿ ಬೆಳಗಾದಂತೆ । ನಾನಿಲ್ಲದ ಭಕ್ತಿಯ ಬಯಸಿದಡುಂಟೆ
ಕೂಡಲಸಂಗಮದೇವಾ [೨೮೬] ಸತ್ಯಸಂಬಂಧ ಸಯವಾದ ಭೃ
ತ್ಯಾಚಾರವೆನಗಿಲ್ಲವಯ್ಯಾ. । ಅನುದಿನ ನಿಮ್ಮ ನೆನೆಯಲು ಭಕ್ತಿಯುಲ್ಲ
ವಯ್ಯಾ ಎನಗೆ. । ಕೂಡಲಸಂಗಮದೇವಾ, ಕರುಣಿ, ಕೃಪೆಯ ಮಾಡಯ್ಯಾ [ ೨೮೭ ]
ಶಬ್ದಸಂಭಾಷಣೆಯ ನುಡಿಯ ವರ್ತಿಸಿ ನುಡಿವೆ, । ತೊಡಹದ ಕೆಲಸದ ಬ
ಣ್ಣದಂತೆ । ಕಡಿಹಕ್ಕಿ ಒರೆಗೆ ಬಾರದು, ನೋಡಾ. । ಎನ್ನ ಮನದಲೊಂ

ದು, ಹೃದಯದಲೊಂದು, । ವಚನದಲೊಂದು ನೋಡಾ. । ಕೂಡಲಸಂಗಮದೇವಾ,
ಆನು ಭಕ್ತನೆಂಬ ಹುಸಿಯ ಮಸಕವನೇನ ಬಣ್ಣಿಸುವೆನಯ್ಯಾ [ ೨೮೮ ]
ಹಾಲ ತೊರೆಗೆ ಬೆಲ್ಲದ ಕೆಸರು, ಸಕ್ಕರೆಯ ಮಳಲು, । ತವರಾಜದ ನೊರೆ ತೆರೆ
ಯಂತೆ ಆದ್ಯರ ವಚನವಿರಲು, । ಬೇರೆ ಬಾವಿಯ ತೋಡಿ ಉಪ್ಪ
ನೀರನುಂಬವನ ವಿಧಿಯಂತೆ । ಉತ್ತೆನ್ನ ಮತಿ, ಕೂಡಲಸಂಗಮದೇವಾ
[ ೨೮೯ ] ಜನ್ಮ ಹೊಲ್ಲೆಂಬೆನೆ, ಜನ್ಮವ ಬಿಡಲಹೆನು. । ಭಕ್ತರೊಲವ ಪ
ಡೆವೆನೆ, ಭಕ್ತಿಯ ಪಥವನರಿವೆನು. । ಲಿಂಗವೆಂದು ಬಲ್ಲೆನೆ, ಜಂಗಮ
ವೆಂದು ಕಾಬೆನು. । ನಿಚ್ಚ ನಿಚ್ಚ ಶಿವರಾತ್ರಿಯ ಮಾಡಬಲ್ಲೆನೆ, ಕೈಲಾಸವ ಕಾಣಬಲ್ಲೆ
ನು. । ಎನ್ನಲ್ಲಿ ನಡೆಲ್ಲಾಗಿ, ನಾನು ಭಕ್ತನೆಂತಹೆನಯ್ಯಾ, । ಕೂಡಲಸಂಗ
ಮದೇವಾ [ ೩೯೦ ] ಉಡುವಿನ ಭಾವದಲ್ಲಿ ಹಡೆದರೆಮ್ಮವರು, ಊಸರವಳ್ಳಿ

೯೬

ಯಂತೆ ಎನ್ನ ಇರವು, । ಬಾವುಲ ಬಾಳುವೆಯ ತರನಂತೆ ! ಹೊತ್ತಾರೆ ಎದ್ದ ಕುರು
ಡಂಗೆ ಆಗುಸೆಯಲ್ಲಿ । ಅಸ್ತಮಾನದಂತೆ– ಆನು ಭಕ್ತಿಯ ಬಯಸಿದಡಹುದೆ ಕೂಡ
ಲಸಂಗಮದೇವಾ [ ೨೯೧ ] ಬಸುರ ಬಾಳುವೆಗೆ, ನಿಮ್ಮಲ್ಲಿ ಮಸಿಯ ಹೂಸಿ
ನೇರಿಲಹಣ್ಣ
ಮಾರುವಂತೆ, ಕಾಲ ಸಾಲ । ದಾರಿದ್ರ್ಯಕ್ಕಂಜಿ ನಿಮ್ಮ ಮರೆಹೊಕ್ಕೆನಯ್ಯಾ. ಆವು
ದ ಹುಸಿಯೆಂಬೆ ಆವುದ । ಕಿರಿದೆಂಬೆ ಇದ ನೀನೆ ಬಲ್ಲೆಯಯ್ಯಾ,
ಕೂಡಲಸಂಗಮದೇವಾ, ನಾನು । ಉದರಪೋಷಕನಯ್ಯಾ. [ ೨೯೨ ] ಮೂ
ಗ ಕಂಡ ಕನಸಿನಂತಾುತೆನ್ನ ಭಕ್ತಿ; । ಗುಣವ ಹೇಳಬಾರದಾರಿಗೆಯೂ,
ಕೇಳಲೆಂತೂ ಬಾರದು. । ಎನ್ನ ಹೇಗತನವ ಮಾಣಿಸು, ಕೂಡಲಸಂಗಮದೇವಾ.
[ ೨೯೩ ] ಕಾಣಿಯ ಲೋಭ ಕೋಟಿಯ ಲಾಭವ ಕೆಡಿಸಿದುದ ನಾನರಿಯೆ

ಯೆನಯ್ಯಾ. । ಕೂಡಲಸಂಗನ ಶರಣರ ಸಂಗದಿಂದ ಅರಿದಡೆ । ನಾನು ಬದು
ಕುವೆನಯ್ಯಾ. [ ೨೯೪ ] ಏನನೋದಿ, ಏನ ಕೇಳಿ, ಏನ ಮಾಡಿಯೂ ಫಲವೇನು,
ನಿಮ್ಮವರೊಲಿಯದನ್ನಕ್ಕ । ಶಿವ ಶಿವ, ಮಹಾದೇವಾ, । ಬಾಳಿಲ್ಲದವಳ ಓಲೆಯಂತಾ
ಯಿತ್ತೆನಗೆ, । ಕೂಡಲಸಂಗಮದೇವಾ. [ ೨೯೫ ] ಮುನ್ನೂರರುವತ್ತು ದಿನ
ಶ್ರವವ ಮಾಡಿ, । ಕಳನೇರಿ ಕೈಮರೆದಂತಾಯಿತ್ತೆನ್ನ ಭಕ್ತಿ. । ಎನಿಸು
ಕಾಲ ಲಿಂಗಾರ್ಚನೆಯ ಮಾಡಿ, । ಏವೆನಯ್ಯಾ । ಮನದಲ್ಲಿದ್ದ
ಢವಿಲ್ಲದನ್ನಕ್ಕ । ಕೊಡನ ತುಂಬಿದ ಹಾಲ ಕೆಡಹಿ, । ಉಡುಗಲೆ
ನ್ನಳವೆ, ಕೂಡಲಸಂಗಮದೇವಾ [ ೨೯೬] ಶಬ್ದಸುಖಕ್ಕೆ ಮಚ್ಚಿ, ಮಾತಿಂಗೆ ಮಾತನೆ ಕೊ
ಟ್ಟು, ಕೆಟ್ಟೆನಯ್ಯಾ ! । ಅನುಭಾವದ ಅಕ್ಕವೆಯಾಗದೆ, ಬಿಬ್ಬನೆ ಬಿರಿದೆನಯ್ಯಾ ! । ಅಮೃತ
ದ ಕೊಡನ ತುಂಬಿ, ಒಡೆಯ ಹೊಯ್ದು, ಅರಸಲುಂಟೇ । ಸ್ವಾಮಿಭೃತ್ಯ

ಸಂಬಂಧವೇ ಎನ್ನ ಭಕ್ತಿ, ಪ್ರತ್ಯುತ್ತರ ನಾಯಕನರಕ । ಕೂಡಲಸಂಗಮದೇವಾ.
[ ೨೯೭ ] ಅಂಕವೋಡಿದಡೆ ತೆತ್ತಿಗಂಗೆ ಭಂಗವಯ್ಯಾ, । ಕಾದಿ ಗೆಲಿಸಯ್ಯಾ ಎನ್ನ
ನು. । ಕಾದಿ ಗೆಲಿಸಯ್ಯಾ ಕೂಡಲಸಂಗಮದೇವಯ್ಯಾ, । ಎನ್ನ ತನು ಮನ ಧನದಲ್ಲಿ
ವಂಚನೆುಲ್ಲದೆ. [ ೨೯೮]
ಹೇಡಿ ಬಿರಿದ ಕಟ್ಟಿದಂತೆ ಊತೆನ್ನ ವೇಷ: । ಕಾದಬೇಕು, ಕಾದುವ
ಡೆ ಮನವಿಲ್ಲ । ಆಗಳೆ ಹೋಱತ್ತು ಬಿರಿದು, । ಹಗರಣ ನಗೆಗೆಡೆ
ಯಾುತ್ತು. । ಮಾರಂಕ ಜಂಗಮ ಮನೆಗೆ ಬಂದಡೆ । ಕಾಣದಂ
ತಡ್ಡ ಮುಸುಡಿಟ್ಟಡೆ । ಕೂಡಲಸಂಗಮದೇವ ಜಾಣ, ಹಲುದೋೞೆ ಮೂಗ ಕೊ
ಯ್ವ. [ ೨೯೯ ] ಅಚ್ಚ ಶರಣರು ನಿಮ್ಮ ನಿಚ್ಚ ನೆನೆವರು, । ಬಚ್ಚ ಬ
ರಿಯ ಮಾತನಾಡುವೆನು. । ಒಪ್ಪಚ್ಚಿ ಅರೆಭಕ್ತಿ, ನೆನೆಯಲೀಯದು ನಿಮ್ಮ.
ಮೆಚ್ಚರು ನಿಮ್ಮವರು ಎನ್ನನು ಕೂಡಲಸಂಗಮದೇವಾ. [ ३೦೦ ]

ಆಡುವುದಳವಟ್ಟಿತ್ತು, ಹಾಡುವುದಳವಟ್ಟಿತ್ತು, । ಅರ್ಚನೆಯಳವಟ್ಟಿತ್ತು, ಪೂ
ಜನೆಯಳವಟ್ಟಿತ್ತು, । ನಿತ್ಯಲಿಂಗಾರ್ಚನೆ ಮುನ್ನವೆಯವಳವಟ್ಟಿತ್ತು. । ಕೂಡಲಸಂಗನ
ಶರಣರು ಬಂದಡೆ, । ಏಗುವುದು, ಏ ಬೆಸೆನೆಂಬುದು ಒಪ್ಪಚ್ಚಿ ಅಳವಡದು. [ ೩೦೧ ] ಒ
ಡೆಯರಿಗೆ ಒಡವೆಯನೊಪ್ಪಿಸಲಾರದೆ । ಮೊರೆಡುವ ಮನ
ವ ನಾನೇನೆಂಬೆ । ನೆತ್ತಿಯಲ್ಲಿ ಆಲಗ ತಿರುಹುವಂತಪ್ಪ । ವೇದನೆಯ
ಹುದೆನಗೆ. । ಕೊಯ್ದ ಮೂಗಿಂಗೆ ಕನ್ನಡಿಯ ತೋರುವಂತಪ್ಪ
ವೇದನೆಯಹುದೆನಗೆ. । ಬೆಂದ ಹುಣ್ಣ ಕಂಬಿಯಲ್ಲಿ ಕೀಸುವಂತಪ್ಪ
ವೇದನೆಯಹುದೆನಗೆ. । ಕೂಡಲಸಂಗಮದೇವಾ ನೀ ಮಾಡಿ ನೋಡುವ ಹಗರಣವ । ನಾ
ಮಾಡಿಹೆನೆಂದಡೆ, ಮನಕ್ಕೆ ಮನ ನಾಚದೆ ಅಯ್ಯಾ [ ೩೦೨ ] ಹೊರಿಸಿಕೊಂಡು
ಹೋದ ನಾು, ಮೊಲನನೇನ ಹಿಡಿವುದಯ್ಯಾ । ಇರಿಯದ ವೀರ,

ಇಲ್ಲದ ಸೊಬಗುವ ಹೇಳುವುದೆ ನಾಚಿಕೆ. । ಆನು ಭಕ್ತನೆಂತೆಂಬೆನಯ್ಯಾ, ಕೂಡಲ
ಸಂಗಮದೇವಾ [ ೩೦೩ ] ಎನ್ನ ಭಕ್ತನೆಂದೆಂಬರು: । ಎನ್ನ ಹೊರಹಂಚೆ, ಒಳ
ಬೊಳ್ಳೆತನವನರಿಯರಾಗಿ. । ಎನ್ನ ಮಾನಾಪಮಾನವೂ ಶರಣರಲ್ಲಿ, ಜಾತಿವಿ
ಜಾತಿಯೂ ಶರಣರಲ್ಲಿ, । ತನುಮನಧನ[ವೂ] ಶರಣರಲ್ಲಿ. । ವಂಚನೆಯುಳ್ಳ ಡಂಭ
ಕ ನಾನು. । ತಲೆಯೊಡೆಯಂಗೆ ಕಣ್ಣ ಬೈಚಿಡುವೆ । ಕೂಡಲಸಂ
ಗಮದೇವಾ. [ ೩೦೪ ] ನೋಡುವರುಳ್ಳಡೆ ಮಾಡುವೆ ದೇಹಾರವ.
ಎನಗೊಂದು ನಿಜವಿಲ್ಲ, ಎನಗೊಂದು ನಿಷ್ಪತ್ತಿಲ್ಲ. । ಲಿಂ
ಗವ ತೋರಿ ಉದರವ ಹೊರೆವ ಭಂಗಗಾರ ನಾನು, । ಕೂಡಲಸಂಗಮದೇವಾ [ ೩೦೫ ]
ಭಕ್ತಿ ಎಳ್ಳನಿತಿಲ್ಲ, ಯುಕ್ತಿಶೂನ್ಯನಯ್ಯಾ ನಾನು. । ತನುವಂಚಕ,
ಮನವಂಚಕ, ಧನವಂಚಕ ನಾನಯ್ಯಾ. । ಕೂಡಲಸಂಗಮದೇವಾ, ಒಳಲೊಟ್ಟೆ ಎನ್ನ ಮಾತು.

[ ೩೦೬ ] ತನು ನಿಮ್ಮದೆಂಬೆ, ಮನ ನಿಮ್ಮದೆಂಬೆ, ಧನ ನಿಮ್ಮದೆಂಬೆ, । ಮತ್ತೆಯೂ ವಂಚನೆ ಮಾಣದಯ್ಯಾ. । ಲಿಂಗ ಜಂಗಮವೆಂಬೆ, ಜಂಗಮ ಲಿಂಗವೆಂಬೆ, । ಮತ್ತೆಯೂ ವಂಚನೆ ಮಾ
ಣದಯ್ಯಾ. । ಒಡಲೊಡವೆ ಹಡೆದರ್ಥ ನಿಮ್ಮದೆಂದರಿಯದೆ । ಕೆಮ್ಮನೆ ಕೆಟ್ಟೆ, ಕೂಡಲಸಂಗಮದೇವಾ. [ ೩೦೭ ] ಊರ ಸೀರೆಗೆ ಅಸಗ ಬಡಿ ಹಡೆದಂತೆ । ಹೊನ್ನೆನ್ನದು, ಮಣ್ಣೆನ್ನದು ಎಂದು ಮ
ರುಳಾದೆ, । ನಿಮ್ಮನರಿಯದ ಮರುಳಾದೆ ನಿಮ್ಮ ಅರಿಯದ
ಕಾರಣ  ಕೆಮ್ಮನೆ ಕೆಟ್ಟೆ, । ಕೂಡಲಸಂಗಮದೇವಾ. [ ೩೦೮ ] ಅರ್ಥಪ್ರಾಣಾಭಿಮಾನ ನಿಮ್ಮದೆಂಬೆ, । ಮತ್ತೆಯೂ ಆಸೆ ಬಿಡದನ್ನಕ್ಕ ಭಕ್ತನೆಂತಪ್ಪೆನಯ್ಯಾ ಶರಣನೆಂತೆನಿಸುವೆನಯ್ಯಾ, । ಕೂಡಲಸಂಗನ ಶರಣರ ಸಕಲರತಿಗೆ ಸಲ್ಲದನ್ನಕ್ಕ [ ೩೦೯
]

ಡಂಗೆ ಘಟಸರ್ಪನ ತೋರುವಂತೆ !। ಶಿವಶರಣೆಂದಡೆ ಕಿವಿ ಕೇಳದಂತಿಹೆನು, । ಮ
ನಕ್ಕೆ ಮನವೇ ಸಾಕ್ಷಿಯಯ್ಯಾ, ಕೂಡಲಸಂಗಮದೇವಾ [ ೩೧೦ ] ಆದ್ಯರ ವಚನ
ಪರುಷವೆಂ

ಬೆನು, । ಆ ಪರುಷವೆನಗೆಂತು ದೊರೆಕೊಂಬುದಯ್ಯಾ । ತನು ಮನ ಧನವ ವಿವರಿ
ಸಿ ನುಡಿವೆ । ಸೋಂಕಿಂಗೆ ಸೈರಿಸಲಾರೆ, । ಹೊಲೆಯರ ಮದ್ದಳೆಯಂತೆ ನು
ಡಿವ ಡಂಬಕ ನಾನಯ್ಯಾ, । ಕೂಡಲಸಂಗಮದೇವಾ. [ ೩೧೧ ] ಕಾಂಚನವೆಂ
ಬ ನಾಯ ನಚ್ಚಿ ನಿಮ್ಮ ನಾನು ಮರೆದೆನಯ್ಯಾ. । ಕಾಂಚನ
ಕ್ಕೆ ವೇಳೆಯಲ್ಲದ ಲಿಂಗಕ್ಕೆ ವೇಳೆಯಲ್ಲ. । ಹಡಿಕೆಗೆ ಮಚ್ಚಿದ ಸೊಣಗ
ಅಮೃತದ ರುಚಿಯ ಬಲ್ಲುದೆ ಕೂಡಲಸಂಗಮದೇವಾ [ ೩೧೨ ] ಒಲಿದ ಗಂ
ಡನೊಮ್ಮೆ ಒಲ್ಲದಿಪ್ಪ ಕಂಡವ್ವಾ. । ತಪ್ಪೆನ್ನದು, ತಪ್ಪೆನ್ನದು !। ತನು ಮನ ಧನದಲ್ಲಿ ಮಾ
ಟಕೂಟವೆಂದರಿಯದ । ತಪ್ಪೆನ್ನದು, ತಪ್ಪೆನ್ನದು !। ಕಡೆಲ್ಲದ ಹುಸಿ ಎ

ನ್ನದು, ಕೂಡಲಸಂಗಮದೇವಾ. [ ೩೧೩ ] ಕಾಣುತ್ತ ಕಡೆಗಣಿಸಿ, ಕೆಡಿಸಿ, ಅರಸುವ
ಮತಿಭ್ರಷ್ಟ ನಾನು ಲಿಂಗಯ್ಯಾ. । ತನುಲೋಭ ಮನಲೋಭ ಧನಲೋಭ ಮುಂದುಗೆ
ಡಿಸಿ ಕಾಡಿಹವೆನ್ನ. । ತನು ಮನ ಧನವ ನಿವೇದಿಸಿದವರ ಮನೆಯ ಮಗ ನಾನಯ್ಯಾ,
ಕೂಡಲಸಂಗಮದೇವಾ. [ ೩೧೪ ] ಹಗಹದಲ್ಲಿ ಬಿದ್ದವರ ಮೇಲೆ ಒರ
ಳ ನೂಕುವರೆ । ಕೋಳದ ಮೇಲೆ ಸಂಕೋಲೆಯನಿಕ್ಕುವರೆ । ಬೆಂದ ಹು
ಣ್ಣ ಕಂಬಿಯಲ್ಲಿ ಕೀಸುವರೆ । ಕೂಡಲಸಂಗಯ್ಯ ಕಾಡುವ ಕಾ
ಟ । ಸಿರಿಯಾಳಂಗಲ್ಲದೆ ಸೈರಿಸಬಹುದೆ [ ೩೧೫ ] ಸೋಲಬಲ್ಲ
ರು ಅವರು, ಗೆಲಲರಿಯರಯ್ಯಾ. । ತನು ಮನ ಧನದಲ್ಲಿ ವಂಚನೆಯನರಿ
ಯರಯ್ಯಾ. । ದಾಸ ಸಿರಿಯಾಳನವರು. । ಕೂಡಲಸಂಗ ಶರಣರು ಉಪಚಾ
ರವನರಿಯರಯ್ಯಾ. [ ೩೧೬ ] ಮಾತಿನಲ್ಲಿ ಶ್ರೋತ್ರಸುಖವ ನುಡಿಯಬಹು

ದಲ್ಲದೆ । ಮಾಡುವ ಸತ್ಕ್ರಿಯೆಂದ ಭಕ್ತನೆನಿಸಲು ಬಾರದು. ।
ಅರ್ಥಪ್ರಾಣಾಭಿಮಾನವಾರಿಗೆ
ಯೂ ಸಮನಿಸದು, । ಲಿಂಗಮುಖದಲುದಯವಾದ ಶರಣಂಗಲ್ಲದೆ ಅಯ್ಯಾ. ಕೂಡಲ
ಸಂಗನ ಶರಣರ ಭಕ್ತಿಭಂಡಾರವು ಎನಗೆಂತು ಸಾಧ್ಯವಪ್ಪುದು ಹೇಳೆನ್ನ ತಂದೆ
[ ೩೧೭ ] ಬಾಣ ಮಯೂರನಂತೆ ಬಣ್ಣಿಸಬಲ್ಲೆನೆ । ಸಿರಿಯಾಳನಂತೆ ಊಣಲಿ
ಕ್ಕಬಲ್ಲೆನೆ । ದಾಸಿಮಯ್ಯನಂತೆ ಉಡಕೊಡಬಲ್ಲೆನೆ । ಉಂಡು ಉಟ್ಟು, ಕೊಟ್ಟ
ಡೆ ಮ್ಯುಗೆ ಮುಯ್ಯೆನಿಸಿತ್ತು, । ಎನಗೆ ಕೊಟ್ಟಡೆ ಧರ್ಮವೆನಿಸಿತ್ತು, । ಕೂಡಲಸಂಗಮ
ದೇವಾ. [ ೩೧೮ ] ದಾಸಿದೇವ ತನ್ನ ವಸ್ತ್ರವನಿತ್ತು ತವನಿಧ್ಧಿಯ ಪ್ರಸಾದವ
ಪಡೆದ. । ಸಿರಿಯಾಳ ತನ್ನ ಮ ಗನನಿತ್ತು ಪ್ರಾಣಪ್ರಸಾದವ ಪಡೆದ. । ಬಲ್ಲಾಳದೇವ
ತನ್ನ ವಧುವನಿತ್ತು ಸಮತೆಪ್ರಸಾದವ ಪಡೆದ. । ಇವರೆಲ್ಲರೂ ತಮತಮಗೆ ಮಾಡಿ
ಹಡೆದರು ಸಮ್ಯಕ್ಷವದವಿಯನು. । ನಾನೇನನೂ ಅರಿಯದ ಭಕ್ತಿಯ ಬಡವಂ

ಗೆ ಕರುಣಿಸು । ಕೂಡಲಸಂಗಮದೇವಾ. [ ೩೧೯ ] ತ್ರಿವಿಧ ತ್ರಿವಿಧದಲ್ಲಿ ತಪ್ಪಿದ ತ
ಪ್ಪುಕ ನಾನಯ್ಯಾ. । ಒಮ್ಮಿಂಗೆ ಕರುಣಿಸಯ್ಯಾ. । ಇದ
ನರಿದು ಇನ್ನು ತಪ್ಪಿದೆನಾದಡೆ । ನೀವು ಮಾಡಿತ್ತೆ ಸಲ್ಲುವುದು. ಕೂಡಲಸಂಗಮ
ದೇವಾ. [ ೩೨೦ ] ಎನ್ನ ತಪ್ಪು ಅನಂತಕೋಟಿ, ನಿಮ್ಮ ಸೈರಣೆಗೆ ಲೆಕ್ಕವಿ
ಲ್ಲ, । ಇನ್ನು ತಪ್ಪಿದೆನಾದಡೆ ನಿಮ್ಮ ಪಾದವೆ ದಿಬ್ಯ. । ಕೂಡಲಸಂ
ಗಮದೇವಯ್ಯಾ. । ನಿಮ್ಮ ಪ್ರಮಥರ ಮುಂದೆ ಕಿನ್ನರ ಬೊಮ್ಮಣ್ಣ
ಸಾಕ್ಷಿ. [ ೩೨೧ ] ಅಡಿಗಡಿಗೆ ಎನ್ನ ಮನವ ಜಡಿದು ನೋಡದಿರ
ಯ್ಯಾ. । ಬಡವನೆಂದೆನ್ನ ಕಾಡದಿರಯ್ಯಾ. । ಎನಗೆ ಒಡೆಯರುಂಟು
ಕೂಡಲಸಂಗನ ಶರಣರು. [ ೩೨೨ ] ಭಕ್ತಿವಿಶೇಷವ ಮಾಡುವಡೆ ಹತ್ತು ಬೆರ
ಳುಂಟು, । ಹಾಸಿ ದುಡಿವಡೆ ತನಗುಂಟು, ತನ್ನ ಪ್ರಮಥರಿಗುಂಟು. । ಮಾ

ರಿತಂದೆಗಳಂತೆ ಎನಗೇಕಹುದಯ್ಯಾ । ರತ್ನದ ಸಂಕಲೆಯನಿಕ್ಕಿ ಕಾಡಿಹ ಕೂ
ಡಲಸಂಗಮದೇವ, । ಶಿವಧೋ ಶಿವಧೋ ! [ ೩೨೩ ] ಮನೆ ನೋಡಾ
ಬಡವರು:ಮನ ನೋಡಾ
ಘನ. । ಸೋಂಕಿನಲ್ಲಿ ಶುಚಿ:ಸರ್ವಾಂಗ ಕಲಿಗಳು. । ಪಸರಕ್ಕನುವಿಲ್ಲ :ಬಂದ ತತ್ಕಾಲಲಕೆ
ಉಂಟು,
ಕೂಡಲಸಂಗನ ಶರಣರು ಸ್ವತಂತ್ರಧೀರರು. [ ೩೨೪ ] ತತ್ವವನರಿ
ದೆಹೆನೆಂದು ಮೃತ್ಯುವ ಕರೆಕೊಂಡೆನಯ್ಯಾ. । ನಾನೆತ್ತ ಬಲ್ಲೆ ನಿಮ್ಮ ಶರ
ಣರಂತುವನು । ನಾನೆತ್ತ ಬಲ್ಲೆ ನಿಮ್ಮ ಪ್ರಮಥರಂತುವನು ।
ಸರ್ವಾಪರಾಧಿ ನಾನು. । ಎನ್ನ ಮನದ ಕೊನೆಯ ಸೂತಕ ಹಿಂಗದು, । ಕೂ
ಡಲಸಂಗಮದೇವಾ. [ ೩೨೫ ] ಆ ಮಿಹಿಲಾಳು ಭೋಜ ದೇವುಲಾಳು. । ಆನು ಸೂಳೆ,
ನಮ್ಮಕ್ಕ ಸೂಳೆ. । ಬೆಳ್ಳಿಗೆಯಾವಿನ ಕರುವೆಂದಡೆ ಬಳ್ಳವಾಲ ಕರೆವುದೆ । ಕೂಡಲ
೧೦೭ ಸಂಗನ ಶರಣರ ಮುಂದೆ ನಾನು ಕಾದಿಹೆ, ಬಾ ಬಿಸಿಲೆ. [ ೩೨೬ ] ಆನೆಯೂ ಆ

ದಾರಿಯಲ್ಲಿ ಹೋಲುತ್ತೆಂದಡೆ, । ಆಡೂ ಆ ದಾರಿಯಲ್ಲಿ ಹೋಲುತ್ತೆನ್ನಬಹುದೆ । ಕೂ
ಡಲ ಸಂಗನ ಶರಣರಿಗೆ ಆನು ಸರಿಯೆಂದು ಗಳಹಲಿಬಹುದೆ । ಜಂಗಮಕ್ಕೆ ಮಾ
ಡುವ ಭಕ್ತರಿಗೆ ಆನು ಸರಿಯೆ । ಹೇಳಾ, ಕೂಡಲಸಂಗಮದೇವಾ? [ ೩೨೭ ] ಆ
ಕರಿಯಾ
ಕೃತಿಯ ಸೂಕರನ ಹೋಲಿಸಿದಡೆ । ಆ ಕರಿಯಾಗಲರಿವುದೆ
ಭೂನಾಗನಾಕೃತಿಯನು ವ್ಯಾಳೇಶನ ಹೋಲಿಸಿದಡೆ । ವ್ಯಾಳೇಶನಾ
ಗಲರಿವುದೆ । ನಾನು ಭಕ್ತನಾದಡೇನಯ್ಯಾ, । ನಮ್ಮ ಕೂಡ
ಲಸಂಗಮದೇವನ ಸದ್ಭಕ್ತರ ಹೋಲಲರಿವೆನೆ [ ೩೨೮ ] ಮೋಟನ
ಮೌಳಿ, ಮೂಕೊರತಿಯ ಶೃಂಗಾರ, । ಬೇಟ ಕುರುಡಂಗೆ ನಗೆಗೆಡೆಯಾಯಿತ್ತು.
ನಮ್ಮ ಕೂಡಲಸಂಗನ ಶರಣರ ಮುಂದೆ । ನಾನು ಭಕ್ತನೆಂಬ ನಾಚಿಕ್ಕೆ ಸಾಲದೆ
[ ೩೨೯ ] ಮೂಗಿಲ್ಲದ ಮುಖಕ್ಕೆ ಶೃಂಗಾರವೆ । ವಿಕೃತವೇಷಧಾರಿಯಾ

ನು, ಭಂಡನು ! ಲಜ್ಜೆಭಂಡನು ! । ಕೂಡಲಸಂಗನ ಶರಣರಲ್ಲಿ । ಹಾವ ತೋರಿ ಹವಿಯ ಬೇಡುವಂತೆ [ ೩೩೦] ಮಾವಿನಕಾಯೊಳಗೆ ಒಂದು ಎಕ್ಕೆಯ ಕಾಯಿ ನಾನಯ್ಯಾ. ಆನು ಭಕ್ತನೆಂತೆಂಬೆ ನಿಮ್ಮ ಶರಣರ ಮುಂದೆ ನಾಚಿಕೆಯಿಲ್ಲದೆ । ಕೂಡಲಸಂಗನ ಶರಣರ ಮುಂದೆ ನಾನೆಂತು ಭಕ್ತನಪ್ಪೆನಯ್ಯಾ [ ೩೩೧ ] ಮರದ ನೆಳಲಲಿದ್ದು ತನ್ನ ನೆಳಲನರಸಬಹುದೆ । ನಿಮ್ಮ ಶರಣರ ಮುಂದೆ ನಾನೇತರ ಭಕ್ತನಯ್ಯಾ । ನಿಮ್ಮ ಶರಣರ ಮುಂದೆ ನಾನೇತರ ಯುಕ್ತನಯ್ಯಾ । ಆನು ಭಕ್ತನೆಂಬ ನುಡಿ ಸುಡದೆ, ಕೂಡಲಸಂಗಮದೇವಾ [ ೩೩೨ ] ಎನ್ನಿಂದ ಕಿರಿಯರಿಲ್ಲ, ಶಿವಭಕ್ತರಿಂದ ಹಿರಿಯರಿಲ್ಲ. । ನಿಮ್ಮ ಪಾದ ಸಾಕ್ಷಿ, ಎನ್ನ ಮನ ಸಾಕ್ಷಿ. । ಕೂಡಲಸಂಗಮದೇವಾ, ಎನಗಿದೇ ದಿಬ್ಯ [ ೨೨೩ ] ಆನು ಭಕ್ತನಲ್ಲಯ್ಯಾ, ಆನು ವೇಷಧಾರಿಯಯ್ಯಾ. । ಕಾಟುಗ, ಕೇತುಗ, ಪೋಲುಗ ಎಂಬುದು ಎನ್ನ ಹೆಸರು. । ಕೂಡಲಸಂಗಮದೇವಾ.

ನಿಮ್ಮ ಶರಣರ ಮನೆಯ ಮಗ ನಾನಯ್ಯಾ [ ೩೩೪ ] ಡಂಬೂ ಡಳುಹೂ ಎನ್ನದ
ಯ್ಯಾ, ಡಂಬಕನೆಂಬವ ನಾನಯ್ಯಾ. । ನಿಮ್ಮ ನಂಬಿದ ಶರಣರ [ನಂಬದ] ಡಿಂಗರಿಗ
ನಾನು, ಕೂ ಡಲಸಂಗಮದೇವಾ

[ ೩೩೫ ] ಚೆನ್ನ ಚೇರಮನ ಬಂಟ ನಾನಯ್ಯಾ । ಎನ್ನ ಚಾಗು
ಬೊಲ್ಲನ ಕಾವ ಗೋವನೆಂಬರು. । ಕೂಡಲಸಂಗನ ಶರಣರೊಡೆಯರಾಗಿ । ತ
ಮ್ಮ ತೊತ್ತಿನ ಮಗನೆಂದು ಒಲಿದಂತೆ ನುಡಿವರು [ ೩೩೬ ] ಕಾಲಲೊ
ದೆದು ಬಡಿದು ಜಡಿವರಯ್ಯಾ, ಭಕ್ತಿಯೆಯ್ದದೆಂದೆನ್ನ.
ಜರೆವರಯ್ಯಾ, ನುಡಿವರಯ್ಯಾ. । ಕೂಡಲಸಂಗನ ಶರಣರೊಡೆಯರಾ
ಗಿ [ ೩೩೭ ] ನಡೆವರಯ್ಯಾ ಒಡೆಯರು ತನು-ಮನ-ಧನದ ಮೇಲೆ, । ನುಡಿವರಯ್ಯಾ
ಒಂದು ನಿಮಿಷ ಬಾರದಿರ್ದಡೆ, । ಜರೆವರಯ್ಯಾ ಒಡೆಯರು ಮನಬಂದ ಪರಿಯ
ಲು. । ಶಿವಾ ಶಿವಾ ! ಅಣೆವರಯ್ಯಾ ಮಂಡೆಯನೂರಿ. । ಪ್ರಾಣದ ಒಡೆಯರ

ಯ್ಯಾ । ಕೂಡಲಸಂಗಮದೇವಾ, ನಿಮ್ಮ ಶರಣರು. [ ೩೩೮ ] ಅರ್ಥ ಪ್ರಾಣ ಅಭಿಮಾ
ನಕ್ಕೆ ಒಡೆಯರು ಸದ್ಭಕ್ತರಲ್ಲದೆ । ಎನಗಾರೂ ಇಲ್ಲಯ್ಯಾ । 'ಭೃತ್ಯಾಪರಾ
ಧಃ ಸ್ವಾಮಿನೋ ದಂಡಃ । ಕೂಡಲಸಂಗಮದೇವಾ, ನೀವೇ ಪ್ರಮಾಣು. [ ೩೩೯ ]
ಅರ್ಚಿಸ
ಲರಿಯೆ, ಪೂಜಿಸಲರಿಯೆ, । ನಿಚ್ಚ ಶಿವರಾತ್ರಿಯ ನಾ ಮಾಡಲರಿಯೆ। ಕಪ್ಪ
ಡಿ ವೇಷದಿಂದಾನು ಬಂದಾಡುವೆ, ಕಪ್ಪಡಿವೇಷದಿಂ
ದ. । ಈಶ ನಾ ನಿಮ್ಮ ದಾಸರ ದಾಸಿಯ ದಾಸನಯ್ಯಾ, । ನಿಮ್ಮ ವೇ
ಷಧಾರಿಯ ಮನೆಯ ಪಂಗುಳ ನಾನಯ್ಯಾ, । ಕೂಡಲಸಂಗಮದೇವಾ । ನಿ
ಮ್ಮ ಲಾಂಛನ ಧರಿಸಿಪ್ಪ ಉದರಪೋಷಕ ನಾನಯ್ಯಾ. [ ೩೪೦ ] ಅಪ್ಪನು ಡೋಹ
ರ ಕಕ್ಕಯ್ಯನಾಗಿ, । ಮುತ್ತಯ್ಯ ಚೆನ್ನಯ್ಯನಾದರೆ ಆನು ಬದುಕೆನೆ । ಮತ್ತಾ
ಶ್ವಪಚಯ್ಯನ ಸನ್ನಿಧಿಂದ । ಭಕ್ತಿಯ ಸದ್ಭಾವ ನಾನು ಅರಿವೆನಯ್ಯಾ.

ಕಷ್ಟಜಾತಿ ಜನ್ಮದಲಿ ಜನಿಸಿದೆ ಎನ್ನ, । ಎನಗಿದು ವಿಧಿಯೆ ಕೂಡಲಸಂಗಮ
ದೇವಾ [ ೩೪೧ ] ಉತ್ತಮಕುಲದಲ್ಲಿ ಹುಟ್ಟಿದೆನೆಂಬ । ಕಷ್ಟತನದ ಹೊರೆಯ ಹೊ
ರಿಸದಿರಯ್ಯಾ, । ಕಕ್ಕಯ್ಯನೊಕ್ಕುದನಿಕ್ಕ ನೋಡಯ್ಯಾ, । ದಾಸಯ್ಯಾ ಶಿವದಾನ
ವನೆರೆಯ ನೋಡಯ್ಯಾ, । ಮನ್ನಣೆಯ ಚೆನ್ನಯ್ಯನೆನ್ನುವ ಮನ್ನಿಸ. । ಉ
ನ್ನತ ಮಹಿಮ, । ಕೂಡಲಸಂಗಮದೇವಾ, ಶಿವಧೋ ಶಿವಧೋ ! [ ೩೪೨ ]
ಸೆಟ್ಟಿಯೆಂದೆನೆ ಸಿರಿಯಾಳನ । ಮಡಿವಾಳನೆಂಬೆನೆ ಮಾಚಯ್ಯನ
ಡೋಹರನೆಂಬೆನೆ ಕಕ್ಕಯ್ಯನ । ಮಾದಾರನೆಂಬೆನೆ ಚೆನ್ನಯ್ಯನ । ಆನು
ಹಾರುವನೆಂದಡೆ ಕೂಡಲಸಂಗಯ್ಯ ನಗುವನಯ್ಯಾ [ ೩೪೩ ] ಚೆನ್ನಯ್ಯನ ಮನೆ
ಯ ದಾಸನ ಮಗನು, । ಕಕ್ಕಯ್ಯನ ಮನೆಯ ದಾಸಿಯ ಮಗಳು, । ಇವರಿಬ್ಬರು ಹೊಲ
ದಲು ಬೆರಣಿಗೆ ಹೋಗಿ, ಸಂಗವ ಮಾಡಿದರು. । ಇವರಿಬ್ಬರಿಗೆ ಹುಟ್ಟಿದ

ಮಗ ನಾನು, । ಕೂಡಲಸಂಗಮದೇವ ಸಾಕ್ಷಿಯಾಗಿ. [ ೩೪೪ ] ಸೂಳೆಗೆ ಹುಟ್ಟಿದ ಕೂಸಿ
ನಂತೆ । ಆರನಾದಡೆಯೂ 'ಅಯ್ಯಾ, ಅಯ್ಯಾ ಎನಲಾರೆ. । ಚೆನ್ನಯ್ಯನೆಮ್ಮಯ್ಯನು,
ಚೆನ್ನಯ್ಯನ ಮಗ ನಾನು. । ಕೂಡಲಸಂಗನ ಮಹಾಮನೆಯಲಿ । ಧರ್ಮಸಂತಾನಿ
ಭಂಡಾರಿ ಬಸವಣ್ಣನು. [ ೨೪೫ ] ಹರನು ಮೂಲಿಗನಾಗಿ, ಪುರಾತರೊ
ಳಗಾಗಿ, । ಬಳಿ ಬಳಿಯಲು ಬಂದ ಮಾದಾರನ ಮಗ ನಾನಯ್ಯಾ. । ಕಳೆದ ಹೊ
ಲೆಯನೆಮ್ಮಯ್ಯ, ಜಾತಿಸೂತಕ. । ಮಾದಾರನ ಮಗ ನಾನಯ್ಯಾ.
ಪನ್ನಗಭೂಷಣ ಕೂಡಲಸಂಗಯ್ಯಾ, ಚೆನ್ನಯ್ಯನೆನ್ನ ಮುತ್ತಯ್ಯನಜ್ಜ
ನಪ್ಪನಯ್ಯಾ [ ೩೪೬ ] ಅಪ್ಪನು ನಮ್ಮ ಮಾದಾರ ಚೆನ್ನಯ್ಯ. । ಬೊಪ್ಪ
ನು ನಮ್ಮ ಡೋಹರ ಕಕ್ಕಯ್ಯ. । ಚಿಕ್ಕಯ್ಯನೆಮ್ಮಯ್ಯ ಕಾಣಯ್ಯ. । ಅಣ್ಣ
ನು ನಮ್ಮ ಕಿನ್ನರ ಬೊಮ್ಮಯ್ಯ. । ಎನ್ನನೇತಕ್ಕಯಿರಿ, ಕೂಡಲ ಸಂಗಯ್ಯಾ [ ೩೪೭ ]

ಭಕ್ತಿಲ್ಲದ ಬಡವ ನಾನಯ್ಯಾ: । ಕಕ್ಕಯ್ಯನ ಮನೆಯಲ್ಲೂ ಬೇಡಿದೆ, । ಚೆನ್ನಯ್ಯ
ನ ಮನೆಯಲ್ಲೂ ಬೇಡಿದೆ, । ದಾಸಯ್ಯನ ಮನೆಯಲ್ಲೂ ಬೇಡಿದೆ. । ಎಲ್ಲಾ ಪುರಾತರು
ನೆರೆದು ಭಕ್ತಿಭಿಕ್ಷವನಿಕ್ಕಿದಡೆ
ಎನ್ನ ಪಾತ್ರೆ ತುಂಬಿತ್ತು, ಕೂಡಲಸಂಗಮದೇವಾ. [ ೩೪೮ ] ಹಿರಿಯಯ್ಯ ಶ್ವಪ
ಚಯ್ಯ. । ಕಿರಿಯಯ್ಯ ಡೋಹರ ಕಕ್ಕಯ್ಯ. । ಅಯ್ಯಗಳಯ್ಯ ನಮ್ಮ ಮಾದಾ
ರ ಚೆನ್ನಯ್ಯ. । ಕೂಡಲಸಂಗಮದೇವಾ, । ನಿಮ್ಮ ಶರಣರು ಎನ್ನ ಸ
ಲಹುವರಾಗಿ. [ ೩೪೯ ] ಎಮ್ಮ ತಾಯಿ ನಿಂಬಿಯವ್ವೆ ನೀರನೆರೆದುಂಬಳು,
ಎಮ್ಮಯ್ಯ ಚೆನ್ನಯ್ಯ ರಾಯಕಂಪಣವ ಹೇರುವ. । ಎಮಗೆ ಆರೂ ಇ
ಲ್ಲವೆಂಬಿರಿ, । ಎಮ್ಮಕ್ಕ ಕಂಚಿಯಲ್ಲಿ ಬಾಣಸವ ಮಾಡುವಳು. । ಎಮಗೆ ಆರೂ
ಇಲ್ಲವೆಂಬಿ
ರಿ, । ಎಮ್ಮ ಅಜ್ಜರ ಅಜ್ಜರು ಹಡೆದ ಭಕ್ತಿಯ ನಿಮ್ಮ ಕೈಯಲು ಕೊಂಬೆ, । ಕೂಡಲ
೧೧೪ ಸಂಗಮದೇವಾ. [ ೩೫೦ ] ಎನಗಾರೂ ಇಲ್ಲ, ಎನಗಾರೂ ಇಲ್ಲವೆಂಬರು.

ಬಾಣನವ ನಾನು, ಮಯೂರನವ ನಾನು, । ಕಾಳಿದಾಸನವ ನಾನು. । ಕಕ್ಕಯ್ಯ
ಹಿರಿಯಯ್ಯ, ಚಿಕ್ಕಯ್ಯ
ಚೆನ್ನಯ್ಯ । ಎತ್ತಿ ಮುದ್ದಾಡಿಸಿದರೆನ್ನ, ಕೂಡಲಸಂಗಯ್ಯಾ [ ೩೫೧ ] ಅಯ್ಯಾ, ನಿ
ಮ್ಮ ವಂಶವಳಿಯಲು ಒಬ್ಬ ತೊತ್ತಿನ ಮಗ ಹುಟ್ಟಿದ. । ಆತನ ತೊತ್ತಿನ ಮಗ
ನಾನಯ್ಯಾ,
ಬಳಿದೊತ್ತು, ಬಳಗದೊತ್ತು, ವಂಶದೊತ್ತು ನಾನಯ್ಯಾ. । ಕೂಡಲಸಂಗಮದೇ
ವಯ್ಯಾ, । ನಿಮ್ಮ ಒಡೆತನಕ್ಕೆ ಕೇಡಿಲ್ಲವಾಗಿ, ಎನ್ನ ತೊತ್ತುತನಕ್ಕೆ ಕೇಡಿಲ್ಲ. [ ೩೫೨]
ಕೈಯ ಬೋಹರಿಗೆ, ಮಂಡೆಯ ಮೇಲೆ ಸಿಂಬೆ, । ಸಿಂಬಕನ ಮನೆಯ
ಮಗ ನಾನಯ್ಯಾ. । ಕೂಡಲಸಂಗಮದೇವರ ಮಂಚದ ಕೋಡೇರಿ ಬಂದ । ತೊ
ತ್ತಿನ ಮಗ ನಾನಯ್ಯಾ. [ ೩೫೩ ] ಅರಸರ ಮನೆಯಲ್ಲಿ ಅರಸಿಯಾಗಿಪ್ಪುದರಿಂದ, । ಭ
ಕ್ತರ ಮನೆಯ ತೊತ್ತಾಗಿಪ್ಪುದು ಕರ ಲೇಸಯ್ಯಾ.। ‘ತಾರೌ ಅಗ್ಘವಣಿ, ನೀಡೌ
ಪತ್ರೆಯ, । ಲಿಂಗಕ್ಕೆ ಬೋನವ ಹಿಡಿಯೌ ಎಂಬರು.। ‘ಕೂಡಲಸಂಗನ ಮಹಾಮನೆ

ಯಲ್ಲು । ಒಕ್ಕುದನುಣೌ ತೊತ್ತೇ ಎಂಬರು. [ ೩೫೪ ] ಆನು ನಿಮ್ಮ ಶರಣರಿ
ಗೆ, ಮಂಡೆಯ ಬೋಳಿಸಿಕೊಂಡು । ಗಂಡುದೊತ್ತಾದೆನಯ್ಯಾ. । ಕೂಡಲಸಂಗಮದೇವ
ಯ್ಯಾ, ನಿಮ್ಮ ಶರಣರಿಗೆ. [ ೩೫೫ ] ಅನುದಿನ ಮನಮುಟ್ಟಿ ಧನ್ಯನಯ್ಯಾ, ದಮ್ಮಯ್ಯಾ!
ದಮ್ಮಯ್ಯಾ! । ನಿಮ್ಮ ಧರ್ಮದ ಕವಿಲೆಯಾನಯ್ಯಾ. । ಕೂಡಲಸಂಗ
ಮದೇವಯ್ಯಾ. । ನಿಮ್ಮ ಶರಣರ ಮನೆಯ ಮಗ ನಾನಯ್ಯಾ. [ ೩೫೬ ] ಕಾಮ
ವ ತೊರೆದಾತ, ಹೇಮವ ಜರೆದಾತ, । ಭಾನುವಿನ ಉದಯ
ಕ್ಕೆ ಒಳಗಾಗದ ಶರಣನು. । ಆಗಳೂ ನಿಮ್ಮ ಮಾಣದೆ ನೆನೆವರ
ಮನೆಯಲು ಶ್ವಾನನಾಗಿರಿಸು, । ಮಹಾದಾನಿ ಕೂಡಲಸಂಗಮದೇವಾ. [ ೩೫೭ ]
ಮೇಲಾಗ
ಲೊಲ್ಲೆನು ಕೀಳಾಗಲಲ್ಲದೆ, । ಕೀಳಿಂಗಲ್ಲದೆ ಹಯನು ಕರೆವುದೆ। ಮೇಲಾಗಿ ನರಕದಲೋ
ಲಾಡಲಾರೆನು.। ನಿಮ್ಮ ಶರಣರ ಪಾದಕ್ಕೆ ಕೀಳಾಗಿರಿಸು, । ಮಹಾದಾನಿ ಕೂಡ

ಲಸಂಗಮದೇವಾ. [ ೩೫೮ ] ಬ್ರಹ್ಮಪದವಿಯನೊಲ್ಲೆ, ವಿಷ್ಣುಪದವಿಯ ನೊಲ್ಲೆ, । ರುದ್ರಪದವಿಯನೊಲ್ಲೆ. । ನಾನು ಮತ್ತಾವ ಪದವಿಯನೊಲ್ಲೆನಯ್ಯಾ । ಕೂಡಲ ಸಂಗಮದೇವಾ, ನಿಮ್ಮ ಸದ್ಭಕ್ತರ । ಪಾದವನರಿದಿಪ್ಪ ಮಹಾಪದವಿಯ ಕರುಣಿಸಯ್ಯಾ [ ೩೫೯ ] ಕಾಗೆ ವ್ವಿಸುವ ಹೊನ್ನಕಳಸವಹುದರಿಂದ । ಒಡೆಯರು ಜೋಗೈ ಸುವ ಚಮ್ಮಾವುಗೆಯ ಮಾಡಯ್ಯಾ । ಅಯ್ಯಾ ನಿಮ್ಮ ಶರಣರ ಪಾದಕ್ಕೆ ಚ ಮ್ಮಾವುಗೆಯ ಮಾಡಯ್ಯಾ । ಕರ್ಮಾವಲಂಬಿನಃ ಕೇಚಿತ್ ಕೇ ಚಿತ್ ಜ್ಞಾನಾವಲಂಬಿನಃ । ವಯಂ ತು ಶಿವಭಕ್ತಾನಾಂ ಪಾದರಕ್ಷಾವಲಂ ಬಿನಃ । ಕೂಡಲಸಂಗಮದೇವಾ, । ನಿಮ್ಮ ಸೆರಗೊಡ್ಡಿ ಬೇಡುವುದೊಂದೇ ವರವ ಕರುಣಿ ಸಯ್ಯಾ [ ೩೬೦ ] ಆವಾವ ಭಾವದಲ್ಲಿ ಮಾಡಿ ಕೂಡಿಹೆನೆಂಬವರ । ಬಾಗಿಲ ತೋರಯ್ಯಾ ತನುವನೊಪ್ಪಿಸಿದವರ, ಮನವನೊಪ್ಪಿಸಿದವರ, ಧನವನೊಪ್ಪಿಸಿದವರ । ಬಾಗಿಲ ತೋ

ರಯ್ಯಾ. । ಇವೆಲ್ಲವನೊಪ್ಪಿಸಿ ಜಂಗಮವೆನ್ನವರೆನ್ನವರೆಂಬವರ । ಕೆರಹ ಹೊತ್ತಿರಿಸೆನ್ನನು,
ಕೂಡಲಸಂಗಮದೇವಾ. [ ೩೬೧ ] ಆಯತ, ಸ್ವಾಯತದನುಭಾವವ ನಾನೆತ್ತ ಬಲ್ಲೆನು । ಲಿಂ
ಗ ಜಂಗಮಕ್ಕೆ ಮಾಡಿ ನೀಡುವ । ಅಚ್ಚ ಶರಣರ ಮನೆಯಲು ಭೃತ್ಯನಾಗಿಪ್ಪೆ
ನಯ್ಯಾ. । ಇದು ಕಾರಣ ಕೂಡಲಸಂಗನ ಶರಣರಲ್ಲದೆ ಅನ್ಯವನರಿಯೆನಾಗಿ. [ ೩೬೨ ]
ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ, । ಅಂಬುಜಕೆ ಭಾನುವಿನ
ಉದಯದ ಚಿಂತೆ, । ಭ್ರಮರಂಗೆ ಪರಿಮಳದ ಬಂಡುಂಬ
ಚಿಂತೆ, । ಎನಗೆ ನಮ್ಮ ಕೂಡಲಸಂಗನ ಶರಣರ ನೆನೆವುದೆ ಚಿಂತೆ.
[ ೩೬೩ ] ಹೊಲಬುಗೆಟ್ಟ ಶಿಶು ತನ್ನ ತಾಯ ಬಯಸುವಂತೆ, । ಬಳಿದಪ್ಪಿದ ಪ
ಶು ತನ್ನ ಹಿಂಡನರಸುವಂತೆ, । ಬಯಸುತ್ತಿರ್ದೆನಯ್ಯಾ ನಿಮ್ಮ ಶ
ರಣರ ಬರವನು. । ಬಯಸುತ್ತಿರ್ದೆನಯ್ಯಾ ನಿಮ್ಮ ಭಕ್ತರ ಬರವನು.

ದಿನಕರನುದಯಕ್ಕೆ ಕಮಳ ವಿಕಸಿತವಾದಂತೆ । ಎನಗೆ ನಿಮ್ಮ ಶರಣರ ಬರ
ವು, ಕೂಡಲಸಂಗಮದೇವಾ [ ೩೬೪ ] ಸೂರ್ಯನ ಉದಯ ತಾವರೆಗೆ ಜೀವಾಳ,
ಚಂದ್ರಮನುದಯ ನ್ಡೆಲೆಗೆ ಜೀವಾಳ. । ಕೂಪರತಾವಿನಲ್ಲಿ ಕೂಟ ಜೀವಾ
ಳವಯ್ಯಾ. । ಒಲಿದ ರಾವಿನಲ್ಲಿ ನೋಟ ಜೀವಾಳವಯ್ಯಾ. । ಕೂಡಲಸಂಗನ ಶ
ರಣರ । ಬರವೆನಗೆ ಪ್ರಾಣ ಜೀವಾಳವಯ್ಯಾ [ ೩೬೫ ] ಜಲವ
ತಪ್ಪಿದ ಮತ್ಸ್ಯ ಬದುಕುವುದೇ ಸೋಜಿಗ, । ಗಣತಿಂತಿಣಿಯೊಳಗಿರಿ
ಸೆನ್ನ ಲಿಂಗವೆ. । ಶಿವ ಶಿವಾ, ಕೂಡಲಸಂಗಮದೇವಾ, । ಸೆರಗೊಡ್ಡಿ ಬೇಡುವೆನು
[ ೩೬೬ ] ಅಯ್ಯಾ, ನಿಮ್ಮ ಮಹಾವ್ರತಿಗಳನಗಲಿ ಬದುಕಲಾರೆನು. । ಶಿವಧೋ ಶಿ
ವಧೋ ! ಕಂಗಳಶ್ರುಗಳಲ್ಲಿ ಮುಂದುಗಾಣೆನು. । ಲಿಂಗಸಂಗಿಗಳನಗಲಿ ಆನೆಂತು
ಬದುಕುವೆ, । ಕೂಡಲಸಂಗಮದೇವಾ. [ ೩೬೭ ] ಜಜ್ಜನೆ ಜರಿದೆನು, ಜಜ್ಜನೆ

ಜರಿದೆನು, ಜಜ್ಜನೆ ಜರಿದೆ ನೋಡಯ್ಯಾ । ಬಿಬ್ಬನೆ ಬಿರಿದೆನು, ಬಿಬ್ಬನೆ ಬಿರಿದೆ
ನು, ಬಿಬ್ಬನೆ ಬಿರಿದೆ ನೋಡಯ್ಯಾ । ನಾನೊಬ್ಬನೆ ಉಳಿದೆನು, ನಾನೊಬ್ಬನೆ ಉಳಿದೆನು,
ನಾನೊಬ್ಬನೆ ಉಳಿದೆ ನೋಡಯ್ಯಾ । ಕೂಡಲಸಂಗಮದೇವಾ, ನಿಮ್ಮ ಶರಣರನಗಲಿದ
ಕಾರಣ

[ ೩೬೮ ] ಕಂಡರೆ ಮನೋಹರವಯ್ಯಾ, ಕಾಣದಿದ್ದರೆ ಅವಸ್ಥೆ ನೋಡಯ್ಯಾ
ಹಗಲಿರುಳಹುದು, ಇರುಳು ಹಗಲಹುದು. । ಎಂತದನು ಆ
ಳವಾಡಿ ಕಳೆವೆನು । ಒಂದು ಜುಗ ಮೇಲೆ ಕೆಡೆದಂತೆ ಇಹುದು. । ಕೂಡ
ಲಸಂಗನ ಶರಣರನಗಲುವ ದಾವತಿಂದ । ಮರಣವೇ
ಲೇಸು ಕಂಡಯ್ಯಾ. [ ೩೬೯ ] ಅಂಗೈ ತಿಂದುದೆನ್ನ, ಕಂಗಳು ಕೆತ್ತಿಹವಯ್ಯಾ. । ಬಂ
ದಹರಯ್ಯಾ ಪುರಾತರೆನ್ನ ಮನೆಗೆ, । ಬಂದಹರಯ್ಯಾ ಶರಣರೆನ್ನ ಮನೆ
ಗೆ. । ಕಂಡ ಕನಸು ದಿಟವಾಗಿ ಜಂಗಮ ಮನೆಗೆ ಬಂದರೆ, । ಶಿವಾರ್ಚನೆಯ

೧೨೦

ಮಾಡುವೆ, । ಕೂಡಲಸಂಗಮದೇವಯ್ಯಾ, ನಿಮ್ಮ ಮುಂದೆ. [ ೩೭೦ ] ಲಿಂಗವ ಪೂಜಿಸುತ್ತ ಜಂಗಮದ ಮುಖವ ನೋಡುತ್ತಿಪ್ಪ। ಸುಖವ ಕೊಡು, ಕಂಡಾ ಲಿಂಗವೆ, । ಪರಮಸುಖವ ಕೊಡು, ಕಂಡಾ ಲಿಂಗವೆ. । ಕೂಡಲಸಂಗಮದೇವಾ, ಇದೇ ವರವ ನಿಮ್ಮಲ್ಲಿ ಬೇಡುವೆ. [ ೩೭೧ ] ಮನೆದೈವ, ಕುಲದೈವ ಎನಗೆ ನಿಮ್ಮವರಯ್ಯಾ । ತನು ಮೊಸಲು, ಮನ ಮೀಸಲು, ನಯನ ಮೊಸಲು ಎನ್ನ, । ಕೂಡಲಸಂಗಮದೇವಾ, ನಿಮ್ಮ ಶರಣರಿಗೆ [ ೩೭೨ ] ಗಿಳಿಯ ಹಂಜರವಿಕ್ಕಿ, ಸೊಡರಿಂಗೆಣ್ಣೆಯನೆರೆದು, ಬತ್ತಿಯನಿಕ್ಕಿ । ಬರವ ಹಾರುತ್ತಿದ್ದೆನೆಲೆಗವ್ವಾ । ತರಗೆಲೆ ಗಿರಿಕೆಂದಡೆ ಹೊರಗನಾಲಿಸುವೆ; । ಅಗಲಿದೆನೆಂದೆನ್ನ ಮನ ಧಿಗಿಲೆಂದಿತ್ತೆಲೆಗವ್ವಾ । ಕೂಡಲಸಂಗಮದೇವನ ಶರಣರು ಬಂದು, ಬಾಗಿಲ ಮುಂದೆ ನಿಂದು 'ಶಿವಾ' ಎಂದಡೆ, ಸಂತೋಷ ಪಟ್ಟೆನೆಲೆಗವ್ವಾ [ ೩೭೩ ]

ಅಡವಿಯಲೊಬ್ಬ ಕಡು ನೀರಡಿಸಿ, । ಎಡೆಯಲ್ಲಿ ನೀರ ಕಂಡಂತಾಯಿತ್ತಯ್ಯಾ । ಕುರುಡ ಕಣ್ಣ ಪಡೆದಂತೆ, । ಬಡವ ನಿಧಾನವ ಹಡೆದಂತಾಯಿತ್ತಯ್ಯಾ । ನಮ್ಮ ಕೂಡಲಸಂಗನ ಶರಣರ ಬರವೆನ್ನ ಪ್ರಾಣ ಕಂಡಯ್ಯಾ । [ ೩೭೪ ] ಇಂದೆನ್ನ ಮನೆಗೆ ಪ್ರಮಥರು ಬಂದಾರೆಂದು । ಗುಡಿ ತೋರಣವ ಕಟ್ಟಿ, ಷಡುಸಮ್ಮಾರ್ಜನೆಯ ಮಾಡಿ, । ರಂಗವಾಲಿಯನಿಕ್ಕಿ 'ಉಘೇ, ಚಾಂಗು ಭಲಾ' ಎಂದೆಂಬೆ. । ಕೂಡಲಸಂಗನ ಶರಣರು । ತಮ್ಮ ಒಕ್ಕುದನಿಕ್ಕಿ ಸಲಹುವರಾಗಿ. [ ೩೭೫ ]
ಸಸಿಯ ಮೇಲೆ ಸಾಗರವರಿದಂತಾಯಿತ್ತಯ್ಯಾ, ಎನ್ನ ಭಕ್ತಿ. । ಆನಂದದಿಂದ ನಲಿನಲಿದಾಡುವೆನು. । ಆನಂದದಿಂದ ಕುಣಿಕುಣಿದಾಡುವೆನು. । ಕೂಡಲಸಂಗನ ಶರಣರು ಬಂದಡೆ, । ಉಬ್ಬಿ, ಕೊಬ್ಬಿ, ಹರುಷದಲೋಲಾಡುವೆ[ ೩೭೬ ] ಮನ ಮನ ಬೆರಸಿದಲ್ಲಿ ತನು ಕರಗದಿದ್ದಡೆ, । ಸೋಂಕಿನಲ್ಲಿ ಪುಳಕಂಗಳು ಹೊರಹೊಮ್ಮದಿದ್ದ

ಡೆ, । ಕಂಡಾಗಳಶ್ರುಜಲಂಗಳು ಸುರಿಯದಿದ್ದಡೆ, । ನುಡಿವಲ್ಲಿ ಗದ್ಗದಂಗಳು ಪೊಣ್ಮದಿದ್ದಡೆ, । ಕೂಡಲಸಂಗಮದೇವರ ಭಕ್ತಿಗಿದು ಚಿಹ್ನ । ಎನ್ನಲ್ಲಿ ಇವಿಲ್ಲಾಗಿ, ಆನು ಡಂಬಕ ಕಾಣಿರೇ. [ ೩೭೭ ] ಅಷ್ಟವಿಧಾರ್ಚನೆ ಷೋಡಶೋಪಚಾರಂಗಳನು, । ಅರಸ
ರಿಯದ ಬಿಟ್ಟಿ ಮಾಡುವೆನು. । ಎನ್ನ ತಾಗಿದ ಸುಖವ ಜಂಗಮಕ್ಕ
ರ್ಪಿಸಲರಿಯದ ಉಪಚಾರಿಯಾನು. । ಸ್ಥಾವರ ಜಂಗಮವನ
ರಿಯದ ಪೂಜಕ ನಾನು. । ಮತ್ತೆ ನಾಚದೇ ಕೂಡಲಸಂಗಮದೇವಯ್ಯಾ,
ಜಂಗಮವೆನ್ನ ಪ್ರಾಣಲಿಂಗವೆಂಬೆನು. [ ೩೭೮ ] ಆವಗೆಯಲೊದಗಿದ ಕರ್ಪಿನಂತೆ, ಅಮೃತದೊಳಗಿರ್ದ ಸರ್ಪನ ತನುವಿನಂತೆ, । ಇರ್ದೆನಯ್ಯಾ, ಹೊರಗೆ ನುಂಪಾಗಿ. । ಸಿಂಹಕ್ಕೊಲಿದ ಮದಕರಿಯಂತೆ । ಆನು ಜಂಗಮಕ್ಕೊಲಿದೆನಯ್ಯಾ, ಕೂಡಲಸಂಗಮದೇವಾ. [ ೩೭೯ ] ಸ್ಥಾವರ ಜಂಗಮ ಒಂದೆಯೆಂದು ಇದಿರ ನುಡಿದು ನಾನೆ

ಡಹುತಿಪ್ಪೆ. । ಸಹಜನಲ್ಲಯ್ಯಾ, । ಆನು ಸಮ್ಯಕ್ಕನಲ್ಲಯ್ಯಾ. । ಆನುಭಯಲಿಂಗಸಂ
ಗಿಯೆಂಬೆನು, । ಈ ನುಡಿ ಸುಡದಿಹುದೆ, ಕೂಡಲಸಂಗಮದೇವಾ [ ೩೮೦ ] ಮ
ಸಿಯನೇಸುಕಾಲ ಬೆಳಗಿದರೆ, ಬಿಳಿದಾಗಬಲ್ಲುದೆ । ಕರ್ಮಸ್ಥಿತಿ ಬೆನ್ನ ಬಿಡ
ದು. । ಅನಂತಕೋಟಿ ಸನ್ಮಾನವ ಮಾಡಿದರೇನು । ನಿಮಿಷದ ಉದಾಸೀ
ನ ಕೆಡಿಸಿತ್ತು. । ಕೂಡಲಸಂಗಮದೇವಾ । ನಿಮ್ಮ ನಂಬಿಯೂ
ನಂಬದ ಡಂಬಕ ನಾನಯ್ಯಾ. [ ೩೮೧ ] ಎಳ್ಳಿಲ್ಲದ ಗಾಣವನಾಡಿದ ಎತ್ತಿ
ನಂತಾಯಿತ್ತೆನ್ನ ಭಕ್ತಿ. । ಉಪ್ಪ ಅಪ್ಪುವಿನಲ್ಲಿ ಅದ್ದಿ ಮೆಲಿದಂ
ತಾಯಿತ್ತೆನ್ನ ಭಕ್ತಿ । ಕೂಡಲಸಂಗಮದೇವಾ. [ ೩೮೨ ] ಆನು ಮಾಡದೆನೆಂಬ ಕಿಚ್ಚು
ಸಾಲ
ದೆ [ ೩೮೩ ] ಅಷ್ಟವಿಧಾರ್ಚನೆ ಷೋಡಶೋಪಚಾರವ । ಮಾಡುವ ಹಮ್ಮಿನಲ್ಲಿ ಬೆಂದೆ
ನಯ್ಯಾ. । ಲಿಂಗವೆಂದರಿಯದೆ, ಜಂಗಮವೆಂದರಿಯದೆ, । ಪ್ರಸಾದವೆಂದರಿಯ

ದೆ ಆನು ಬೆಂದೆನಯ್ಯಾ । ಕೂಡಲಸಂಗಮದೇವಾ, ಆನು ಮಾಡುವುದೆಲ್ಲವೂ । ಉಪಚಾರವಯ್ಯಾ
[ ೩೮೩ ] ಎನ್ನಲ್ಲಿ ಭಕ್ತಿ ಸಾಸವೆಯ ಷಡ್ಭಾಗದನಿತಿಲ್ಲ. । ಎನ್ನ ಭಕ್ತನೆಂಬರು, ಎನ್ನ ಸಮಯಾ
ಚಾರಿಯೆಂಬರು । ನಾನೇನು ಪಾಪವ ಮಾಡಿದೆನೊ. । ಬೆಳೆಯದ ಮುನ್ನವೆ ಕೊಯ್ವರೆ
ಹೇಳಯ್ಯಾ. । ಇ
ರಿಯದ ವೀರ, ಇಲ್ಲದ ಸೊಬಗು !। ಎಲ್ಲಾ ಒಡೆಯರೂ ಏರಿಸಿ ನುಡಿವರು, । ಎನಗಿದು ವಿ
ದಿಯೆ, ಕೂಡಲಸಂಗಮದೇವಾ [ ೩೮೪ ] ಎನ್ನವರೊಲಿದು ಹೊನ್ನ ಶೂಲದಲ್ಲಿ
ಕ್ಕಿದರೆನ್ನ ಹೊಗಳಿ, ಹೊಗಳಿ, । ಎನ್ನ ಹೊಗಳತೆ ಎನ್ನನಿಮ್ಮೃಗೊಂಡಿತ್ತ
ಲ್ಲಾ- । ಅಯ್ಯೋ, ನೊಂದೆನು, ಸೈರಿಸಲಾರೆನು !। ಅಯ್ಯಾ, ನಿಮ್ಮ ಮನ್ನಣೆಯೆ ಮ
ಸೆದಲಗಾಗಿ ತಾಗಿತ್ತಲ್ಲಾ- । ಅಯ್ಯೋ ನೊಂದೆನು, ಸೈರಿಸಲಾರೆನು.। ಕೂಡಲಸಂ
ಗಮದೇವಾ, । ನೀನೆನಗೆ ಒಳ್ಳಿದನಾದಡೆ । ಎನ್ನ ಹೊಗಳತೆಗಡ್ಡ ಬಾರಾ, ಧರ್ಮೀ ! [ ೩೮೫ ] ಎ
ನ್ನವರೆನಗೊಲಿದು ಹೊನ್ನಶೂಲವನಿಕ್ಕಿದರಯ್ಯಾ. । ಅಹಂಕಾರಪೂರಾಯ ಘಾಯದ
೧೨೫ ಲ್ಲಿ । ಆನೆಂತು ಬದುಕುವೆನೆಂತು ಜೀವಿಸುವೆ । ಜಂಗಮವಾಗಿ ಬಂದು ಜರೆದು, ಸೂಲ

ವನಿಳುಹಿ, । ಪ್ರಸಾದದ ಮದ್ದನಿಕ್ಕಿ, । ಸಲಹು ಕೂಡಲಸಂಗಮದೇವಾ [ ೩೮೬ ] ಎಡದ ಕೈಯಲು
ಹಾಲ ಬಟ್ಟಲು, ಬಲದ ಕೈಯಲು ಓಜುಗಟ್ಟಿಗೆ, । ಆವಾಗ ಬಂದಾನೆಮ್ಮ
ಯ್ಯ, । ಬಡಿದು ಹಾಲ ಕುಡಿಸುವ ತಂದೆ. । ದಂಡಕ್ಷೀರದ್ವಯಂ ಹಸ್ತೇ ಜಂಗಮೋ ಭಕ್ತಿಮಂ
ದಿರಂ । ಅತಿಭಕ್ತ್ಯಾ ಲಿಂಗತ್ತುರಪಹಾಸ್ಯಾದ್ಯಮದಂಡನಮ್! । ಎಂದುದಾಗಿ,
ಕೂಡಲಸಂಗಮದೇವಯ್ಯ, ತಾನೆ । ಭಕ್ತಿಯ ಪಥವ ತೋರುವ ತಂದೆ
[ ೩೮೭ ] ಎನ್ನ ಆಪತ್ತು, ಸುಖ-ದುಃಖವನಿನ್ನಾರಿಗೆ ಹೇಳುವೆ
ಶರಣಸ್ಥಲದವರಿಗೆ ಹೇಳಿದಡೆ ಮಚ್ಚರ ! । ಸವತಿ-ಸಕ್ಕರೆ, ಬೇವು-ಬೆಲ್ಲ
ಉಂಟೆ! ಇನ್ನಾರಿಗೆ ಹೇಳುವೆ! । ಕೂಡಲಸಂಗಮದೇವಾ, ಜಂಗಮವಾಗಿ
ಬಂದು.

ಎನ್ನ ಮನದ ಸೂತಕವ ಕಳೆಯಾ. [ ೩೮೮ ] ನಾನಾಸ್ಥಾನಂಗಳಲ್ಲಿ ಬಂದು ಕುಳ್ಳಿ
ರ್ದುದು ತೆರಳುವುದೆ, ಅಯ್ಯಾ; । ಉಭಯಕುಳಕ್ಕಲ್ಲದೆ ತೆರಳದು. । ಬೀದಿ
ಯಲ್ಲಿ ಬಿದ್ದ ಶಿಶುವನು । ಹೆತ್ತ ತಾಯಿ ಹತ್ತಿರೆ ಬಂದು ಎತ್ತುವಂತೆ, । ಎನ್ನನಾ
ರು ಜನ್ಮಕ್ಕೆ ತಂದು ಅಘೋರನರಕದಲ್ಲಿಕ್ಕಿದುದ ನಾನು ಬಲ್ಲೆ. । ಕೂಡ
ಲಸಂಗಮದೇವಾ ನಿಮ್ಮ ಹಂಗೇನು ಹರಿಯೇನು । ಉಭಯ ಲಿಂಗ
ಜಂಗಮದ ಮೊರೆಹೊಕ್ಕು ಬ ದುಕಿದೆನು. [ ೩೮೯ ] ಅಯ್ಯಾ, ನಿಮ್ಮ ದೇ
ವರೆಂದು ನಂಬಿ ಪೂಜಿಸಲಾಗದಯ್ಯಾ : । ಮೀನಜ, ರೋಮಜ ಮಹಾ
ಮುನಿಗಳ । ಲಯವ ಮಾಡುವುದ ನಾ ಬಲ್ಲೆನಾಗಿ. । ಅಯ್ಯಾ ನಿಮ್ಮ ದೇವರೆಂದು ನಂಬಿ
ಪೂಜಿಸಲಾಗದಯ್ಯಾ । ನವಕೋಟಿಬ್ರಹ್ಮರಿಗೆ । ಪ್ರಳಯವ ಮಾಡುವುದ ನಾ
ಬಲ್ಲೆನಾಗಿ. । ಅಯ್ಯಾ, ನಿಮ್ಮ ದೇವರೆಂದು ನಂಬಿ ಪೂಜಿಸಲಾಗದ

ಯ್ಯಾ । ದಶಕೋಟಿ ನಾರಾಯಣರಿಗೆ । ಮರಣವ ಮಾಡುವುದ ನಾ ಬಲ್ಲೆನಾಗಿ.
ಅಯ್ಯಾ, ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ । ಅನಂತಕೋ
ಟಿರುದ್ರರಿಗೆ । ಲಯವ ಮಾಡುವುದ ನಾ ಬಲ್ಲೆನಾಗಿ. ಅಯ್ಯಾ, ನಿಮ್ಮ ದೇವರೆಂ
ದು ನಂಬಿ ಪೂಜಿಸಲಾಗದಯ್ಯಾ : । ಎನ್ನನೇಳೇಳು ಭವಕ್ಕೆ ತಂದಲ್ಲಿ,
ಅನುಭಯಲಿಂಗಜಂಗಮದ ಮೊರೆಹೊಕ್ಕು । ಭವಂ ನಾಸ್ತಿ
ಯಾಗಿ ಬದುಕಿದೆನಯ್ಯಾ, । ಕೂಡಲಸಂಗಮದೇವಾ. [ ೩೯೦ ]
ಲಿಂಗದರ್ಶನ ಕರಮುಟ್ಟಿ, ಜಂಗಮದರ್ಶನ ಶಿರಮುಟ್ಟಿ, । ಆವುದ ಘನವೆಂ
ಬೆ, ಆವುದ ಕಿರಿದೆಂಬೆ । ತಾಳಸಂಪುಟಕ್ಕೆ ಬಾರದ ಘನವ ಅರ್ಪಿಸ ಹೋದಡೆ, ಅ
ಪರ್ಣ ಮುನ್ನವೆ ಇಲ್ಲ, ಗಮನ ನಿರ್ಗಮನವಾಯಿತ್ತು. ಈ ಉಭಯ ಭೇದವನ್ನರಿ
ಯರಾಗಿ, ಜಂಗಮವೇ ಲಿಂಗ ಕೂಡಲಸಂಗಮದೇವಾ. [ ೩೯೧ ] ಶಿವಭಕ್ತರೆ ಅದ್ಧಿ

ಕರು ನೋಡಯ್ಯಾ. । ಇದಕ್ಕೆ ಅದ್ಧಿಕವಾಗಿ ಜಂಗಮವ ಕಂಡೆ. । ಈ ದ್ವಿವಿಧವನೊಂ
ದೆ ಎಂದು ನಂಬಿದೆ, । ಕೂಡಲಸಂಗಮದೇವಾ. [ ೩೯೨ ] ಕೃತಯುಗದಲ್ಲಿ ಕೇತಾರವೆಂ
ಬ ಮೂಲಸ್ಥಾನ, । ತ್ರೇತಾಯುಗದಲ್ಲಿ ವಾರಣಾಸಿಯೆಂಬ ಮೂಲಸ್ಥಾನ, । ದ್ವಾಪರ
ದಲ್ಲಿ ವಿರೂಪಾಕ್ಷನೆಂಬ ಮೂಲಸ್ಥಾನ, । ಕಲಿಯುಗದಲ್ಲಿ ಪರ್ವತವೆಂ
ಬ ಮೂಲಸ್ಥಾನ- । ಈ ನಾಲ್ಕು ಮೂಲಸ್ಥಾನ. । ನಾನಾ ಸ್ಥಾನವ ಮುಟ್ಟದೆ
ಜಂಗಮವೆ ಲಿಂಗವೆಂದು ನಂಬಿದೆ, । ಕೂಡಲಸಂಗಮದೇವಾ. [ ೩೯೩ ]
ಭಕ್ತದೇಹಿಕನಪ್ಪ ದೇವನು ಸದ್ಭಕ್ತರ ಬಳಿಯಲ್ಲಿ ಬಪ್ಪನಾಗಿ, । ಆಳ್ದ
ನು ಬರಲಾಳು ಮಂಚದ ಮೇಲಿಪ್ಪುದು ಗುಣವೇ ಹೇಳಾ. । ಕೂಡಲಸಂಗಮ
ದೇವಾ, । ಜಂಗಮರೂಪಾಗಿ ಸಂಗಯ್ಯ ಬಂದಾನೆಂದು । ಎಂದೆಂದೂ ನಾನು ಮಂಚ
ವನೇರದ ಭಾಷೆ. [ ೩೯೪ ] ಜಂಗಮದ ಸನ್ನಿಧಿಯಲ್ಲಿ ವಾಹನವನೇರ

ಲಮ್ಮೆ : । ಏರಿದರೆ ಭವ ಹಿಂಗದು. । ಏನು ಕಾರಣ ಮುಂದೆ ಸೂಲವನೇರುವ ಪ್ರಾಪ್ತಿಯುಂಟಾದ ಕಾರಣ, । ಜಂಗಮ ಬರಲಾಸನದಲ್ಲಿ ಇರಲಮ್ಮೆ : । ಇದ್ದರೆ ಭವ ಹಿಂಗದು. । ಏನು ಕಾರಣ ಮುಂದೆ ಕಾಯ್ದ ಇಟ್ಟಿಗೆಯ ಮೇಲೆ ಕುಳ್ಳಿರುವ ಪ್ರಾಪ್ತಿಯುಂಟಾದ ಕಾರಣ. । ಜಂಗಮದ ಮುಂದೆ ದಿಟ್ಟತನದಲ್ಲಿ ಬೆರೆತು ನಿಂದಿರಲಮ್ಮೆನು । ನಿಂದಡೆ ಭವ ಹಿಂಗದಾಗಿ. । ಏನು ಕಾರಣ: ಮುಂದೆ ಹೆಡಗುಡಿಯ ಕಟ್ಟಿ । ಕುಳ್ಳಿರಿಸುವ ಪ್ರಾಪ್ತಿಯುಂಟಾದ ಕಾರಣ. । ಇಂತೀ ಬಾಧೆ ಭವಂಗಳಿಗಂಜುವೆನಯ್ಯಾ.
ನಿಮ್ಮವರ ಸುಳುಹು ನೀವೆಂದೇ ಭಾವಿಸಿ, । ತೊತ್ತು-ಭೃತ್ಯನಾಗಿಪ್ಪೆನಯ್ಯಾ, ಕೂಡಲಸಂಗಮದೇವಾ. [ ೩೯೫ ] ಜಂಗಮವಿರಹಿತ ಲಿಂಗಾರ್ಚನೆ :ಓಡ ಬಿಲಲೆರೆದ ಜಲದಂತೆ. । ಜಂಗಮಸನ್ನಿಹಿತ ಲಿಂಗಾರ್ಚನೆ :ಇದೆ ಭಕ್ತಿಗೆ ಪಥವಯ್ಯಾ

ಜಂಗಮಪ್ರಸಾದಭೋಗೋಪಭೋಗವು :ಎನಗಿದೇ ಲಿಂಗಾರ್ಚನೆ. । ಬೇರೆ ಮ
ತ್ತೊಂದನರಿದೆನಾದಡೆ, । ಕೂಡಲಸಂಗಮದೇವ ನರಕದಲ್ಲಿಕ್ಕುವ. [ ೩೯೬ ] ಭಿತ್ತಿ
ಲ್ಲದೆ ಬರೆಯಬಹುದೆ ಚಿತ್ತಾರವ । ಬಿತ್ತಿ ಬೆಳೆಯಬಹುದೆ ಧರೆಯಿಲ್ಲದೆ
ಜಂಗಮವಿಲ್ಲದೆ ಲಿಂಗಾರ್ಚನೆಯ ಮಾಡಬಹುದೆ । ರೂಢೀಶ್ವರನ
ಭೇದಿಸಬಹುದೆ ! ಒಡಲಿಲ್ಲದೆ.। ನಿರಾಳಕರ್ತೃ ಕೂಡಲಸಂ
ಗಮದೇವ । ಜಂಗಮಮುಖವಾದನಾಗಿ ಮತ್ತೊಂದನರಿಯೆ
ನಯ್ಯಾ. [ ೩೯೭ ] ಸಮಯೋಚಿತದಲ್ಲಿ ಲಿಂಗಾರ್ಚನೆಯ ಮಾಡುತಿ
ಪ್ಪನಾ ಭಕ್ತನು. । ಮಾಡಿದಡೆ ಮಾಡಲಿ, ಮಾಡಿದಡೆ ತಪ್ಪೇನು । ಆ ಜಂಗಮದ
ಶಬ್ದವ ಕೇಳಿ ಪ್ರಸಾದಕ್ಕೆ ಕೈದುಡುಕಿದಡೆ । ಅದು ಪ್ರಸಾದವಲ್ಲ, ಕಿಲ್ಬಿಷ. । ಆ
ಸಮಯೋಚಿತದಲ್ಲಿ ಬಂದ ಜಂಗಮದ ಶಬ್ದವ ಕೇಳಿ । ಪ್ರಸಾದಕ್ಕೆ ಕೈ

ದೆಗೆದಡೆ, ಅದು ಲಿಂಗಕ್ಕೆ ಬೋನ. । ಇದು ಕಾರಣ, ಕೂಡಲಸಂಗಮದೇವಾ, ಇಂತ
ಪ್ಪ ಸದಾಚಾರಿಗಳನೆನಗೆ ತೋರಾ [ ೩೯೮ ] ಉತ್ತಮ ಮಧ್ಯಮ ಕನಿಷ್ಟವೆಂದು,
ಬಂದ ಜಂಗಮವನೆಂದೆನಾದಡೆ । ನೊಂದೆನಯ್ಯಾ, ಬೆಂದೆಯಯ್ಯಾ, ಎ
ನ್ನ ಕಿಚ್ಚು ಎನ್ನ ಸುಟ್ಟಿತ್ತು. । ಸುಖಿಜಂಗಮ, ಸಾ
ಮಾನ್ಯಜಂಗಮ ಉಂಟೆ, । ಕೂಡಲಸಂಗಮದೇವಾ [ ೩೯೯ ] ಲಾಂ
ಛನವ ಕಂಡು ನಂಬುವೆ, ಅವರಂತರಂಗವ ನೀನೇ ಬಲ್ಲೆ.
ತೊತ್ತಿಂಗೆ ತೊತ್ತುಗೆಲಸವಲ್ಲದೆ, ಅರಸರ ಸುದ್ದಿ ಎಮಗೇಕಯ್ಯಾ
ರತ್ನಂವಕ್ತಿಕದಚ್ಚು, । ಕೂಡಲಸಂಗಮದೇವಾ ನಿಮ್ಮ ಶರಣರು. [ ೪೦೦ ] ಆರಾ
ರ ಮನದಲ್ಲಿ ಏನೇನಿಹುದೆಂದರಿಯೆ. । ಒಳ್ಳಿಹರೆಂದೆ
ನಲಮ್ಮೆ, ಹೊಲ್ಲಹರೆಂದೆನಲಮ್ಮೆ, ಶಿವಭಕ್ತರಾದ ಕಾರಣ. । ಜಂಗಮವೆ ಲಿಂಗ
ಕೂಡಲಸಂಗಮದೇವಾ.

[ ೪೦೧ ] ಸಂಗಸಹಿತ ಶರಣರು ಬಂದರೆ। ನಂಬುವುದೆನ್ನ ಮನವು, ನಚ್ಚುವುದೆನ್ನ ಮ
ನವು.। ಹಾಗು ನೇಣೆಂಬ ಭ್ರಾಂತುಳ್ಳನ್ನಕ್ಕ ನಾನು ಭಕ್ತನೆಂತಪ್ಪೆನು?। ಅಂಗಲಿಂಗ ಸನ್ನಿ
ಹಿತವಾಗಿ ಬಂದಡೆ, ಸಂಗ ನೀನೆಂದು,। ಮತ್ತೆ ಮನದಲ್ಲಿ ಸಂದೇಹ ಹೊಳೆದಡೆ। ಬೆಂ
ದುನಲ್ಲಾ ನಾನು, ಕೂಡಲಸಂಗಮದೇವಾ. [ ೪೦೨ ] ಕೆಂಡದಲ್ಲಿಟ್ಟಡೆ ಮೆರ್‍ಐ ಬೆಂ
ದುದೆಂಬರು.। ಕೊಂಡಿಟ್ಟವನ ಕೈ ಮುನ್ನವೆ ಬೆಂದೂದು.। ನೊಂದೆ, ನಾನು ನೊಂದೆ
ನಯ್ಯಾ. ಬೆಂದೆ, ನಾನು ಬೆಂದೆನಯ್ಯಾ.। ಕೂಡಲಸಂ
ಗನ ಶರಣರ ಕಂಡು ಕಾಣದಂತಿದ್ದಡೆ। ಅಂದೇ ಬೆಂದೆನಯ್ಯಾ. [ ೪೦೩ ]
ಎಡದ ಕೈಯಲು ನಿಗಳವನಿಕ್ಕಿ। ಬಲದ ಕೈಯ ಕಡಿದುಕೊಂಡಡೆ ನೋಯದಿಪ್ಪುದೆ
ಪ್ರಾಣವೊಂದಾಗಿ ದೇಹ ಬೇರಿಲ್ಲ.। ಲಿಂಗವ ಪೂಜಿಸಿ ಜಂಗಮವನು
ದಾಸೀನವ ಮಾಡಿದಡೆ। ಬೆಂದೆನಯ್ಯಾ ನಾನು, ಕೂಡಲಸಂಗಮದೇವಾ. [ ೪೦೪ ]

ತನುವ ನೋಯಿಸಿ, ಮನವ ಬಳಲಿಸಿ, । ನಿಮ್ಮ ಪಾದವಿಡದವರೊಳರೆ? ಈ ನುಡಿ ಸುಡದಿಹುದೆ? । ಕೂಡಲಸಂಗಮದೇವಾ. । ಶಿವಭಕ್ತರ ನೋವೇ ಆರು ಲಿಂಗದ ನೋವು [ ೪೦೫ ] ಆತ್ಮಸ್ತುತಿ ಪರನಿಂದೆಯ ಕೇಳಿಸದಿರಯ್ಯಾ, ನಿಮ್ಮ ಧರ್ಮ । ಆನು ಭಕ್ತನೆನ್ನಲ್ಲಿ ಲೇಸುಂಟೆಂದು ಪರಿಣಾಮಿಸಿದಡೆ । ನಿಮಗಾನು ದ್ರೋಹಿಯಯ್ಯಾ. । ಕೂಡಲಸಂಗಮದೇವಾ, । ನಿಮ್ಮ ಶರಣರ ಲೇಸೇ ಎನ್ನ ಲೇಸಯ್ಯಾ.[ ೪೦೬ ] ನಡೆಯಲರಿಯದೆ, ನುಡಿಯಲರಿಯದೆ । ಲಿಂಗವ ಪೂಜಿಸಿ ಫಲವೇನು ! ಫಲವೇನು ! । ಅವರ ದುಃಖವೆನ್ನ ದುಃಖ, ಅವರ ಸುಖವೆನ್ನ ಸುಖ. । ಕೂಡಲಸಂಗನ ಶರಣರ ಮನನೊಂದಡೆ । ಆನು ಬೆಂದೆನಯ್ಯಾ. [ ೪೦೭ ] ಬಂಜೆ ಬೇನೆಯನರಿಯದಂತೆ । ಒಬ್ಬರೊಂದ ನುಡಿವರಿ, ಕೇಳಿರಯ್ಯಾ. । ಎನಗೆ ಆಯುಷ್ಯ ಭವಿಷ್ಯ, ಎನ್ನ ಭಕ್ತರು.

ಎನಗೆ ಆಯುಷ್ಯ ಭವಿಷ್ಯ, ಎನ್ನ ಪ್ರಮಥರು ಕಂಡಯ್ಯಾ. । ಕೂಡಲಸಂಗನ
ಶರಣರು ಮುಖಲಿಂಗಿಗಳಯ್ಯಾ. [ ೪೦೮ ] ಬೇರೂರಲಿದ್ದು ಬಂದ ಜಂಗ
ಮವೆ ಲಿಂಗವೆಂದು, । ಮನೆಯಲಿದ್ದ ಜಂಗಮವನುದಾಸೀನವ ಮಾಡಿದಡೆ । ನಾನು
ಬೆಂದೆನಯ್ಯಾ. । ಆನು ಬೆಂದ ಬೇಗೆಯನರಿಯೆ, ಕಾಣಾ । ಕೂಡಲಸಂಗಮ
ದೇವಾ [ ೪೦೯ ] ಉಟ್ಟು-ತೊಟ್ಟು ಪೂಜ್ಯವಾಗಿ ಬಂದ ಜಂಗಮ ವಿಶೇಷವೆಂದು,
ಕಂತೆ ಬೊಂತೆಯ ಜಂಗಮ ಬಂದಡೆ ಹೀನವೆಂದು । ಕಂಡೆನಾದ
ಡೆ ಪಂಚಮಹಾಪಾತಕ. ।ಇದು ಕಾರಣ, ಅನ್ನ-ವಸ್ತ್ರ-ಧನ ಮಾಟದಲ್ಲಿ
ಎರಡಾಗಿ ಕಂಡೆನಾದಡೆ ನರಕದಲ್ಲಿಕ್ಕುವ, । ಕೂಡಲಸಂಗಮದೇವ. [ ೪೧೦ ]
ಅಡ್ಡದೊಡ್ಡ ನಾನಲ್ಲಯ್ಯಾ, ದೊಡ್ಡ ಬಸುರನಲ್ಲಯ್ಯಾ, । ದೊಡ್ಡವರನಲ್ಲದೆ ನಿ
ಮ್ಮ ಶರಣರು ಮನ್ನಿಸರಯ್ಯಾ. । ಹಡೆದುಂಬ ಸೂಳೆಯಂತೆ ಧನವುಳ್ಳ

ವರನರಸಿ ಅರಸಿ । ಬೋಧಿಸಲು, ಪ್ರಾರ್ಥಿಸಲು ಮುನ್ನ ನಾನರಿಯೆನಯ್ಯಾ । ದೊ
ಡ್ಡತನವೆನಗಿಲ್ಲಯ್ಯಾ, ಅಂಜುವೆನಂಜುವೆ ನಿಮ್ಮ ಪ್ರಮಥರಿಗೆ । ಅನಾಥ ನಾ
ನಯ್ಯಾ, ಕೂಡಲಸಂಗಮದೇವಾ. [ ೪೧೧ ] ಕುದುರೆ- ಸತ್ತಿಗೆಯವರ ಕಂಡಡೆ
ಹೊರಳಿಬಿದ್ದು ಕಾಲಹಿಡಿವರು, । ಬಡಭಕ್ತರು ಬಂದಡೆ 'ಎಡು
ಲ್ಲ, ಅತ್ತ ಸನ್ನಿ' ಎಂಬರು. । ಎನ್ನೊಡೆಯ ಕೂಡಲಸಂಗಯ್ಯ
ನವರ । ತಡಗೆಡಹಿ ಮೂಗ ಕೊಯ್ಯದೆ ಮಾಬನೆ [ ೪೧೨ ]
ದೂರದಿಂದ ಬಂದ ಜಂಗಮವನಯ್ಯಗಳೆಂದು, । ಸಾರಿದ್ದ ಜಂಗಮ
ವ ಪರಿಚಾರಕರೆಂಬ ಕೇಡಿಂಗೆ ಬೆರಗಾದೆನಯ್ಯಾ । ಸಾರಿದ್ದವರು, ದೂರದ
ವರೆಂದು ಬೇರೆ ಮಾಡಿ ಕಂಡಡೆ, । ಕೂಡಲಸಂಗಮದೇವ ಸಿಂಗಾರದ ಮೂಗ
ಕೊಯ್ಯದೆ ಮಾಬನೆ [ ೪೧೩ ] ಹಿಡಿವೆಡೆಯನೆ ಕಾಸಿ ಹಿಡಿವ,

ಕೈಬೆಂದು ಮಿಡುಮಿಡನೆ ಮಿಡುಕುವ, । ಮರುಳ ಮಾನವನೇ
ಬಡವರೆಂದೆನಬೇಡ ಲಾಂಛನಧಾರಿಯನು, । ಕಡುಸ್ನೇಹದಿಂದವರ ಪೂಜೆಮಾಡುವುದು.
ನಿಜವಡಗಿದ ರೂಪು, ನಿರ್ವಯಲಸ್ಥಾನ, । ನಡೆಲಿಂಗ ಜಂಗಮ ಶಕೂಡಲಸಂಗಮದೇವ
[ ೪೧೪ ]
ಹಾಲ ಕಂದಲು, ತುಪ್ಪದ ಮಡಕೆಯ । ಬೋಡು ಮುಕ್ಕಿನಬೇಡ. ।
ಹಾಲು ಸಿಹಿ, ತುಪ್ಪ ಕಮ್ಮನೆ :ಲಿಂಗಕ್ಕೆ ಬೋನ. । ಕೂಡಲಸಂಗನ ಶರಣರ
ಅಂಗಹೀನರೆಂದಡೆ ನಾಯಕನರಕ [ ೪೧೫ ] ಆಚಾರವರಿರಿ, ವಿಚಾರವರಿರಿ ।
ಜಂಗಮಸ್ಥಲ ಲಿಂಗ ಕಾಣಿರಯ್ಯಾ. ಜಾತಿಭೇದವಿಲ್ಲ, ಸೂತಕವಿಲ್ಲ, ಅಜಾತಂಗೆ
ಕುಲವಿಲ್ಲ.
ನುಡಿದಂತೆ ನಡೆಯದಿದ್ದಡೆ । ಕೂಡಲಸಂಗಯ್ಯ ಮೆಚ್ಚ ಕಾಣಿರಯ್ಯಾ. [ ೪೧೬ ]

ಸ್ಥಾವರಭಕ್ತಂಗೆ ಸೀಮೆಯಲ್ಲದೆ । ಘನಲಿಂಗಜಂಗಮಕ್ಕೆ ಸೀಮೆಯೆಲ್ಲಿಯದು
ಅಂಬುದಿಗೆ ಸೀಮೆಯಲ್ಲದೆ । ಹರಿವ ನದಿಗೆ ಸೀಮೆಯೆಲ್ಲಿಯದು । ಭಕ್ತಂಗೆ ಸೀಮೆಯಲ್ಲದೆ
ಜಂಗಮಕ್ಕೆ ಸೀಮೆಯುಂಟೆ । ಕೂಡಲಸಂಗಮದೇವಾ. [ ೪೧೭ ]

ಎತ್ತಿಕೊಳ್ಳಲೇಕೆ, ಮತ್ತಿಳುಹಲೇಕಯ್ಯಾ। ಧರಧುರ ಭಕ್ತಿಯ ಮಾಡಲೇಕಯ್ಯಾ
ನಿಂದಿಸಲೇಕೆ ಸ್ತುತಿಸಲೇಕೆ । ಹೋಗಬಿಟ್ಟು ಜಂಗಮವ ಹಿಂದೆಯಾಡುವನ ಬಾಯಲ್ಲಿ
ಮೆಟ್ಟಿ ಹುಡಿಹೊಯ್ಯದೆ ಮಾಬನೆ । ಕೂಡಲಸಂಗಮದೇವ [ ೪೧೮ ]

ಮರಕ್ಕೆ ಬೇರು ಬಾಯೆಂದು ತಳುಂಕೆ ನೀರನೆರೆದಡೆ । ಮೇಲೆ ಪಲ್ಲವಿಸಿತ್ತು ನೋಡಾ.
ಲಿಂಗದ ಬಾ ಜಂಗಮವೆಂದು ಪಡಿಪದಾರ್ಥವ ನೀಡಿದಡೆ । ಮುಂದೆ ಸಕಳಾರ್ಥವನೀವನು.
ಆ ಜಂಗಮವ ಹರನೆಂದು ಕಂಡು, ನರನೆಂದು ಭಾವಿಸಿದಡೆ
ನರಕ ತಪ್ಪದು, ಕಾಣಾ ಕೂಡಲಸಂಗಮದೇವಾ.

[ ೪೧೯ ] ಆರಾಧನೆಯ ಮಾಡಿದಡೆ ಅಮೃತದ ಬೆಳಸು, । ವಿರೋಧ್ಧಿಸಿದಡೆ ವಿ
ಪಧ ಬೆಳಸು, । ಇದು ಕಾರಣ ಜಂಗಮಕ್ಕೆ ಅಂಜಲೇಬೇಕು. । ಸ್ಥಾವರ ಜಂ
ಗಮ ಒಂದೆಂದರಿದಡೆ । ಕೂಡಲಸಂಗಮದೇವ ಶರಣಸನ್ನಿಹಿತ. [ ೪೨೦ ]
ಹೊಸತಿಲ ಪೂಜಿಸಿ ಹೊಡವಂಟು ಹೋದ । ಒಕ್ಕಲಿತಿಯಂತಾಯಿ
ತ್ತೆನ್ನ ಭಕ್ತಿ. । ಜಂಗಮವೆನ್ನೊಡೆಯರೆಂದು ಒಕ್ಕುದ ಕೊಂ
ಡು । ಉದಾಸೀನವ ಮಾಡಿದಡೆ, । ಇಹಲೋಕಕ್ಕೆ ದೂರ, ಪರಲೋ
ಕಕ್ಕೆ ದೂರ ! । ಕೂಡಲಸಂಗಮದೇವ ಅಘೋರನರಕದಲ್ಲಿಕ್ಕುವ [ ೪೨೧ ]
ಲಿಂಗವ ಪೂಜೆಯ ಮಾಡಿ, ಜಂಗಮವ ಕಂಡು ಉದಾಸೀನವ ಮಾಡಿದಡೆ, । ಆ
ಲಿಂಗಪೂಜ
ಕರಿಗೆ ಮಾಡಿದ, ಶಿವದೂತರ ದಂಡವೆಂಬುದ. । ಲೋಕದ ಕರ್ಮಿಗಳಿಗೆ ಮಾಡಿದ, ಯ
ಮದೂತರ ದಂಡವೆಂಬುದ. । ಇದು ಕಾರಣ ಲಿಂಗ ಜಂಗಮವನೊಂದೆಂದರಿ

ಯದವರ ಎನಗೆ । ತೋರದಿರಯ್ಯಾ, ಕೂಡಲಸಂಗಮದೇವಾ. [ ೪೨೨ ] ಜಂಗಮ
ನಿಂದೆಯ ಮಾಡಿ, ಲಿಂಗವ ಪೂಜಿಸುವ ಭಕ್ತನ ಆಂಗವಣೆಯೆಂತೂರಿ । ಶಿವಾ ಶಿವಾ
ನಿಂದಿಸುವ ಪೂಜಿಸುವ ಪಾತಕವಿದ ಕೇಳಲಾಗದು. । ಗುರುವಿನ ಗುರು ಜಂಗಮ-
ಇಂತೆಂದುದು ಕೂಡಲಸಂಗನ ವಚನ. [ ೪೨೩ ] ಅರಸನ ಕಂಡು ತನ್ನ ಪುರುಷನ
ಮರೆ
ದಡೆ । ಮರನನೇರಿ ಕಯ್ಯ ಬಿಟ್ಟಂತಾಯಿತ್ತಯ್ಯಾ.
ಇಹಲೋಕಕ್ಕೆ ದೂರ, ಪರಲೋಕಕ್ಕೆ ದೂರ ! । ನಮ್ಮ ಕೂಡಲಸಂಗಮ
ದೇವಯ್ಯ । ಜಂಗಮಮುಖ ಲಿಂಗವಾದ ಕಾರಣ. [ ೪೨೪ ] ಜಂಗಮವಿಲ್ಲ
ದ ಮಾಟ ಕಂಗಳಿಲ್ಲದ ನೋಟ, । ಹಿಂಗಿತ್ತು ಶಿವಲೋಕ ಇನ್ನೆಲ್ಲಿಯದಯ್ಯಾ. । ಲಿಂಗ
ಕ್ಕೆ ಮಾಡಿದ ಬೋನವ ಸಿಂಬಕ ತಿಂಬಂತೆ, । ಸಮಯೋಚಿತವನರಿಯದೆ
ಉದರವ ಹೊರೆವವರ । ನರಕದಲ್ಲಿಕ್ಕದೆ ಮಾಬನೆ ಕೂಡಲಸಂಗಮದೇವ

[ ೪೨೫ ] ಲಿಂಗದಲ್ಲಿ ದಿಟವನರಸುವಡೆ ಜಂಗಮವ ನೆರೆ ನಂಬುವುದು. । ನಡೆ
ಲಿಂಗ, ನುಡಿಲಿಂಗ, ಮುಖಲಿಂಗವೆಂದೆ ನಂಬೋ ! ।'ಯತ್ರ ಮಾಹೇಶ್ವರಸ್ತತ್ರಸ
ನ್ನಿಹಿತನಾಗಿ । ಅಧರ ತಾಗಿದ ರುಚಿಯನುದರ ತಾಗಿದ ಸುಖವ । ಉಂಬ
ಉಡುವ ಕೂಡಲಸಂಗಮದೇವ, ಜಂಗಮಮುಖದಲ್ಲಿ. [ ೪೨೬ ] ಜಂ
ಗಮದ ಮನ-ಭಾವದಲ್ಲಿ ಭಕ್ತನೆ ಭೃತ್ಯನೆಂದು, । ಭಕ್ತನ ಮನ-ಭಾ
ವದಲ್ಲಿ ಜಂಗಮವೆ ಕರ್ತನೆಂದು ಇದ್ದ ಬಳಿಕ, । ಬಂದಿತ್ತು-ಬಾ
ರದು, ಇದ್ದತ್ತು-ಹೋಟತ್ತೆಂಬ ಸಂದೇಹವಿಲ್ಲದಿರಬೇಕು.
ಹೋಟತ್ತೆಂಬ ಗುಣವುಳ್ಳನ್ನಕ್ಕ । ನಿಮಗೆ ದೂರ, ನಿಮ್ಮವರಿಗೆ ಮು
ನ್ನವೆ ದೂರ, । ಶಿವಾಚಾರಕ್ಕಲ್ಲಿಂದತ್ತ ದೂರ. । ಜಂಗಮದ ಹರಿದ ಹರಿವು,
ಜಂಗಮದ ನಿಂದ ನಿಲವು, । ಜಂಗಮದ ಗಳಗರ್ಜನೆ, ಜಂಗಮದ ಕೋಳಾಟಕ್ಕೆ
ಸೈರಿಸದಿದ್ದಡೆ । ನೀ

ನಂದ ಮೂಗ ಕೊಯ್ ಕೂಡಲಸಂಗಮದೇವಾ. [ ೪೨೭ ] ನಯನದಾಹಾರವ ಜಂ
ಗಮವ ನೋಡಿಸುವೆನು, । ಶ್ರೋತ್ರದಾಹಾರವ ಜಂಗಮವ ಕೇಳಿಸುವೆನು, । ಘ್ರಾ
ಣದಾಹಾರವ ಜಂಗಮವ ವಾಸಿಸುವೆನು, । ಜಿಹ್ವೆಯಾಹಾರವ ಜಂಗಮವನೂಡಿ
ಸುವೆನು, । ಕವಚದಾಹಾರವ ಜಂಗಮಕ್ಕೆ ಹೊದ್ದಿಸುವೆನು, । ಅಧಿಕ ಪ್ರೇಮ ಪರಿ
ಣಾಮವ ಮಾಡುವೆನು, । ಸಕಲಪದಾರ್ಥಂಗಳ ನೀಡುವೆನು, । ಕೂಡಲ
ಸಂಗಾ ನಿಮ್ಮ ಶರಣರಿಗೆ. [ ೪೨೮ ] ॥ ಭಕ್ತಮಹೇಶ್ವರ ॥ ಎಂಬ
ತ್ತುನಾಲ್ಕುಲಕ್ಷ ಮುಖದೊಳಗೊಂದೆ ಮುಖವಾಗಿ । ಕಾಡಿ ನೋಡೆ
ನ್ನನು, ಬೇಡಿ ನೋಡೆನ್ನನು, । ಬೇಡದಿದ್ದಡೆ, ಅಯ್ಯಾ, ನಿಮಗೆ ಪ್ರಮಥರಾಣೆ. । ನೀ
ನಾವ ಮುಖದಲ್ಲಿ ಬಂದು ಬೇಡಿದೊಡೀವೆನು. । ಕೂಡಲಸಂಗಮದೇವಾ [ ೪೨೯ ]
ಕಂದಿದೆನಯ್ಯಾ ಎನ್ನ ನೋಡುವರಿಲ್ಲದೆ, । ಕುಂದಿದೆನಯ್ಯಾ

ಎನ್ನ ನುಡಿಸುವರಿಲ್ಲದೆ, । ಬಡವಾದೆನಯ್ಯಾ ಎನ್ನ ತನು ಮನ ಧನವ ಬೇ
ಡುವರಿಲ್ಲದೆ. । ಕಾಡುವ ಬೇಡುವ ಶರಣರ ತಂದು । ಕಾಡಿಸು ಬೇಡಿಸು ಕೂ
ಡಲಸಂಗಮದೇವಾ. [ ೪೩೦ ]  ವೇಷ ಅವಿಚಾರದಲ್ಲಿ ನಡೆುತ್ತೆಂದು । ಆಸುರದ
ಲ್ಲಿ ಬಗುಳುವ ಕುನ್ನಿ, ನೀ ಕೇಳಾ : ।ಹರಿಯನೆ ದಾಸನ ವಸ್ತ್ರವ : ಉಣ್ಣನೆ
ಚೆನ್ನಯ್ಯನ ಸಂಗಾತ । ಪರವಧುವ ಕೊಳ್ಳನೆ ಸಿಂಧುಬಲ್ಲಾಳನ :
ಬೇಡನೆ ಸಿರಿಯಾಳನ ಮಗನ । ನಡೆವುದು ನುಡಿವುದು ಅವಿ
ಚಾರವೆಂದು, । ಭಾವ ವಿಭಾವವೆಂದು ಕಂಡೆನಾದಡೆ ತಪ್ಪೆನ್ನದು, ಮೂಗ
ಕ್ಕೊಯ್ಯ, । ಕೂಡಲಸಂಗಮದೇವಾ. [ ೪೩೧ ] ನೀನಿಕ್ಕಿದ ಬೀಯದಲ್ಲಿ ವಂಚನೆಯು
ಳ್ಳಡೆ । ಸಂಗಾ, ನಿಮ್ಮ ತೊತ್ತುತನಕ್ಕೆ ದೂರವಯ್ಯಾ. । ಕದ್ದು ತಿಂದಡೆ ಕೈ
ಹಿಡಿದೊಮ್ಮೆ ಬಡಿದು । ತುಡುಗುಣಿತನವ ಬಿಡಿಸಯ್ಯಾ. । ಜಂಗ

ಮ ಮನೆಗೆ ಬಂದಲ್ಲಿ ಓಸರಿಸಿದಡೆ । ಹಿಡಿದು ಮೂಗ ಕೊಯ್ಯಯ್ಯಾ । ಕೂಡಲಸಂ
ಗಮದೇವಾ. [ ೪೩೨ ] ದೇವನಿಂತಹನೆಂದು ತೋರಿಯೆ ಕೊಡು
ವೆನು ಗಣಂಗಳಿಗೆ; । ಬಲ್ಲಾಳನ ವಧುವ ಬೇಡಿದಾತನೀ ದೇವ. । ದೇವನಿಂತಹನೆಂದು ತೋರಿ
ಯೆ ಕೊಡುವೆನು ಗಣಂಗಳಿಗೆ; । ದಾಸನ ವಸ್ತ್ರವ ಬೇಡಿದಾತನೀ ದೇವ. । ದೇವನಿಂತಹ
ನೆಂದು ತೋರಿಯೆ ಕೊಡುವೆನು ಗಣಂಗಳಿಗೆ; । ಸಿರಿಯಾಳನ ಮಗನ ಬೇಡಿದಾತ
ನೀ ದೇವ. । ಕೂಡಲಸಂಗಮದೇವ ಜಂಗಮಮುಖಲಿಂ
ಗವಾಗಿ । ಕಾಡಿ ನೋಡುವ, ಬೇಡಿ ನೋಡುವ. [೪೩೩ ] ಹೊನ್ನಿನೊಳಗೊಂದೊ
ರೆಯ, ಸೀರೆಯೊಳಗೊಂದೆಳೆಯ । ಇಂದಿಂಗೆ ನಾಳಿಂಗೆ ಬೇಕೆಂದೆನಾದಡೆ । ನಿಮ್ಮಾ
ಣೆ, ನಿಮ್ಮ ಪ್ರಮಥರಾಣೆ. । ನಿಮ್ಮ ಶರಣರಿಗಲ್ಲದೆಮತೊಂದನರಿಯೆ । ಕೂಡ
ಲಸಂಗಮದೇವಾ [ ೪೩೪ ] ಆಲುತ್ತಲು ಹರೆಯ ಹೊಸಿ, ಅಂಕವ ಮಾಡಿದೆನೆ
ಲ್ಲರ ಕಂಡು. । ಆನು ಬೇಡೆಂದಡೆ ಮಾಣೆ, ಕಲಿತನ ಮಾಡಿದೆನೆಲ್ಲರ ಕಂಡು.

ಅಲ್ಲಿ ಹೋಱತ್ತು ಗಳೆಯೆಂದಡೆ। ಆಸೆ ಮಾಡೆನು, ಕೂಡಲಸಂಗಮದೇವಾ. [ ೪೩೫ ] ಕಾ
ಗೆ ಒಂದಗುಳ ಕಂಡಡೆ ಕರೆಯದೆ ತನ್ನ ಬಳಗವನು। ಕೋಳಿ ಒಂದು ಕುಟು
ಕ ಕಂಡಡೆ ಕೂಗಿ ಕರೆಯದೆ ತನ್ನ ಕುಲವನೆಲ್ಲವ। ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದ
ಡೆ ಕಾಗೆ ಕೋಳಿಂದ ಕರಕಷ್ಟ। ಕೂಡಲಸಂಗಮದೇವಾ. [ ೪೩೬ ] ಆವನೇವನಾದ
ಡೇನು ಹೇಮವಿಲ್ಲದಂಗೈಸಬಹುದೆ। ಕೊಡಲಿಲ್ಲೆಂಬುದರಿಂದ ಸಾಯಲುಬಹು
ದು, ಸೈರಿಸಬಾರದು.। ಬೇಡುವವರ ನೋಡಿ ನೋಡಿ, ಈಯಲಿಲ್ಲದ ಜೀವ
ನವದೇಕೆ। ಕೂಡಲಸಂಗಮದೇವಾ [ ೪೩೭ ] ಹರಗಣಪಙ್ತಿಯ ನಡುವೆ
ಕುಳ್ಳಿರ್ದು। ನಾನು ಒಡೆತನದ ನಾಯಿತೇಜವ ಹೊತ್ತುಕೊಂಡು,। ಮಡದಿಯೆನ್ನಗಲೊ
ಳಗೆ ಸಕಲದೇವಾನ್ನವ। ಒಡೆಯರಿಂದವೂ ಮಿಗಿಲಾಗಿ ಇಕ್ಕಲು, ತೆಗೆದಿರಿಸಿದೆನು.। ಈ
ಪರಿಯ ಆಯ ಕಣ್ಗೆ ತೋರಲು ಕಿಲ್ಬಿಷವಾದವು.। ಕರುಣಿ ಚನ್ನಬಸವಣ್ಣಾ, ಮರೆ
ದು ಕೊಂಡೆನಾದಡೆ,। ಒಡೆಯ ಕೂಡಲಸಂಗಯ್ಯ ಕೆಡಹಿ ನರಕದಲ್ಲಿಕ್ಕುವ [ ೪೩೮ ]

೧೪೫

ಭಕ್ತಿ ಸುಭಾಷೆಯ ನುಡಿಯ ನುಡಿವೆ, ನುಡಿದಂತೆ ನಡೆವೆ, । ನಡೆಯೊಳಗೆ ನು
ಡಿಯ ಪೂರೈಸುವೆ. । ಮೇಲೆ ತೂಗುವ ತ್ರಾಸು ಕಟ್ಟಳೆ ನಿಮ್ಮ ಕೈಯಲ್ಲಿ. । ಒಂದು ಜವೆ
ಕೊರತೆಯಾದಡೆ । ಎನ್ನನದ್ದಿ ನೀನೆದ್ದು ಹೋಗು, ಕೂಡಲಸಂಗಮದೇವಾ. [ ೪೩೯ ]
ಓಡುವಾತ ಲೆಂಕನಲ್ಲ, ಬೇಡುವಾತ ಭಕ್ತನಲ್ಲ. । ಓಡಲಾಗದು ಲೆಂಕನು, ಬೇಡಲಾ
ಗದು ಭಕ್ತನು. । ಓಡೆನಯ್ಯಾ, ಬೇಡೆನಯ್ಯಾ. । ಕೂಡಲಸಂಗಮದೇವಾ. [ ೪೪೦ ]
ಚಂದ್ರನ ಶೈತ್ಯದಲು ಬೆಳೆವ ಕಾಯಕ್ಕೆ । ಬೆಳುದಿಂಗಳು ಬಯಸುವ
ಹಂಗೇಕಯ್ಯಾ । ಶರಣರ ಸಂಗದಲಿರ್ದು ಶಿವನ ಬೇಡುವ ಹಂಗೇಕಯ್ಯಾ
ಕೂಡಲಸಂಗನ ಶರಣರು ಬಂದು ತಮ್ಮವನೆಂದಡೆ ಸಾಲದೆ ಅಯ್ಯಾ [ ೪೪೧ ] ದಾ
ಸನ ವಸ್ತ್ರವ ಬೇಡದ ಮುನ್ನ । ತವನಿಧಿಯನಿತ್ತಡೆ ನಿಮ್ಮ ದೇವರೆಂಬೆ. । ಸಿರಿಯಾಳ
ನ ಮಗನ ಬೇಡದ ಮುನ್ನ । ಕಂಚಿಯಪುರವ ಕೈಲಾಸಕ್ಕೊಯ್ದಡೆ ನಿಮ್ಮ
ದೇವರೆಂಬೆ. । ಬಲ್ಲಾಳನ ವಧುವ ಬೇಡದ ಮುನ್ನ । ಸ್ವಯಲಿಂಗವ ಮಾಡಿದ

ಡೆ ನಿಮ್ಮ ದೇವರೆಂಬೆ। ದೇಹಿ ನೀನು, ವ್ಯಾಪಾರಿಗಳು ನಮ್ಮವರು। ಬೇಡು, ಕೂಡಲಸಂಗಮ
ದೇವಾ, ಎಮ್ಮವರ ಕೈಯಲು [ ೪೪೨ ] ಎಲ್ಲರೂ ವೀರರು, ಎಲ್ಲರೂ ದ್ಧೀರರು,। ಎಲ್ಲರೂ
ಮಹಿಮರು, ಎಲ್ಲರೂ ಪ್ರಮಥರು। ಕಾಳಗದ ಮುಖದಲ್ಲಿ ಕಾಣಬಾರದು,। ಓಡುವ
ಮುಖದಲ್ಲಿ ಕಾಣಬಹುದು। ನಮ್ಮ ಕೂಡಲಸಂಗನ ಶರಣರು ದ್ಧೀರರು, ಉಳಿದವರೆಲ್ಲ
ರೂ ಅಧೀರರು. [ ೪೪೩ ] ಎಲ್ಲಿ ನೋಡಿದಡಲ್ಲಿ ಮನವೆಳಸಿದಡೆ। ಆಣೆ, ನಿ
ಮ್ಮಾಣೆ, ನಿಮ್ಮ ಪ್ರಮಥರಾಣೆ। ಪರವಧುವನುಮಾದೇವಿಯೆಂಬೆ। ಕೂಡ
ಲಸಂಗಮದೇವಾ.[ ೪೪೪ ]  ಹರಿವ ಹಾವಿಂಗಂಜೆ, ಉರಿಯ ನಾಲಗೆಗಂಜೆ,। ಸುರ
ಗಿಯ ಮೊನೆಗಂಜೆ,। ಒಂದಕ್ಕಂಜುವೆ, ಒಂದಕ್ಕಳುಕುವೆ। ಪರಸ್ತ್ರೀ ಪರಧನವೆಂಬೀ ಜೂಬಿಂಗಂಜು
ವೆ। ಮುನ್ನಂಜದ ರಾವಳನೇವಿಧಿಯಾದ !। ಅಂಜುವೆನಯ್ಯಾ, ಕೂಡಲಸಂಗಮದೇವಾ.
[ ೪೪೫ ] ಒಂದಕ್ಕೊಂಬತ್ತ ನುಡಿದು, ಕಣ್ಣ ಕೆಚ್ಚನೆ ಮಾಡಿ, ಗಂಡುಗೆದರಿ। ಮುಡುಹಿಕ್ಕಿ ಕೆ[ಲೆ]ವರ
ಕಂಡಡಂಜುವೆ, ಓಸರಿಸುವೆ !। ಓಡಿದೆನೆಂಬ ಭಂಗವಾದಡಾಗಲಿ। ನಮ್ಮ ಕೂಡಲಸಂಗನ ಶರಣರ ।

ಅನುಭಾವವಿಲ್ಲದವರ । ಹೊಲಮೇರೆಯ ಹೊಂದೆ, ಹೊಲನ ಬಿಟ್ಟೋಡುವೆ. [ ೪೪೬ ]
ಒಡೆಯರು ಬಂದಡೆ
ಗುಡಿ ತೋರಣವ ಕಟ್ಟಿ, । ನಂಟರು ಬಂದಡೆ ಸಮಯವಿಲ್ಲೆನ್ನಿ. । ಅಂದೇಕೆ ಬಾರರು ।
ನೀರಿಂಗೆ ನೇಣಿಂಗೆ
ಹೊರಗಾದಂದು, ಸಮಯಾಚಾರಕ್ಕೆ ಒಳಗಾದಂದು. । ಪರುಷ ಮುಟ್ಟಲು ಕಬ್ಬು
ನ ಸುವರ್ಣವಾಯಿತ್ತು. । ಬಳಿಕ ಬಂಧುಗಳುಂಟೆ, ಕೂಡಲಸಂಗಮದೇವಾ [ ೪೪೭ ]
ಒಡೆಯರಾಡುವ ಮಾತ ಕಡೆಪರಿಯಂತರ ಕೇಳಿ, । ಇದರುವೋಗಿ ಕಿಂ
ಕರನಾಗಿ ನಡುಗುತ್ತ ಬಿನ್ನಹಮಾಡುವ । ಸದ್ಭಕ್ತನ ತೋರಯ್ಯಾ. ಒಡೆ
ಯರಾಡುವ ಮಾತ ಕಂಡು, ಕರೆದಲ್ಲಿ ಕೆಡೆಮೆಟ್ಟಿ । ಬಾು ಘನವೆಂದು ಆಡುವ
ನ ತೋರದಿರಯ್ಯಾ, । ಅವನ ಸಂಗದಲ್ಲಿರಿಸಯ್ಯಾ, । ಅವನ ಸಹಪಂಕ್ತಿಯ
ಲ್ಲಿ ಕುಳ್ಳಿರಿಸದಿರಯ್ಯಾ । ಕೂಡಲಸಂಗಮದೇವಯ್ಯಾ, ನಿಮ್ಮ ಬೇಡುವುದೊಂದೆ ವರವು.
೧೪೮ [ ೪೪೮ ] ಬಡಹಾರುವನೇಸು ಭಕ್ತನಾದಡೆಯೂ ನೇಣಿನ ಹಂಗ ಬಿಡ ! । ಮಾಲೆಗಾ

ರನೇಸು ಭಕ್ತನಾದಡೆಯೂ ಬಾವಿಯ ಬೊಮ್ಮನ ಹಂಗ ಬಿಡ ! । ಬಣಜಿಗನೇಸು ಭಕ್ತನಾ
ದಡೆಯೂ ಒಟ್ಟಿಲ ಬೆನಕನ ಹಂಗ ಬಿಡ ! । ಕಂಚುಗಾರನೇಸು ಭಕ್ತನಾದಡೆಯೂ ಕಾ
ಳಿಕಾದೇವಿಯ ಹಂಗ ಬಿಡ ! । ನಾನಾ ಹಂಗಿನವನಲ್ಲ, ನಿಮ್ಮ ಶರಣರ ಹಂಗಿನವನಯ್ಯಾ
ಕೂಡಲಸಂಗಮದೇವಾ. [ ೪೪೯ ] ಶ್ರೀವಿಭೂತಿ ರುದ್ರಾಕ್ಷಿದ್ದವರ ಲಿಂಗವೆಂಬೆ,
ಇಲ್ಲದವರ ಭವಿಯೆಂಬೆ. । ಕೂಡಲಸಂಗಮದೇವಾ, । ಸದುಭಕ್ತರ ನೀನೆಂ
ಬೆ. [ ೪೫೦ ] ದೇವಸಹಿತ ಭಕ್ತ ಮನೆಗೆ ಬಂದಡೆ । ಕಾಯಕವಾವು
ದೆಂದು ಬೆಸಗೊಂಡೆನಾದಡೆ । ನಿಮ್ಮಾಣೆ ! ನಿಮ್ಮ ಪುರಾತರಾಣೆ !
ತಲೆದಂಡ ! ತಲೆದಂಡ ! । ಕೂಡಲಸಂಗಮದೇವಾ, ಭಕ್ತರಲ್ಲಿ ಕುಲವನರಸಿದಡೆ । ನಿಮ್ಮ ರಾಣಿ
ವಾಸದಾಣೆ. [ ೪೫೧ ] ಲಿಂಗಾಂಗಿಗಳಲ್ಲದವರ, ಶರಣಸಂಗವಿಲ್ಲದವರ । ಕಂಡಡೆ
ನಾಚುವೆ. । ಅವರ ನುಡಿ ಎನಗೆ ಸಮನಿಸದಯ್ಯಾ ಕೂಡಲಸಂಗಮದೇವಾ, । ನೀನು ಅ
ಲ್ಲಿ ಇಲ್ಲದ ಕಾರಣ. [ ೪೫೨ ] ಶ್ರೀವಿಭೂತಿಯ ಹೂಸದವರ, । ಶ್ರೀರುದ್ರಾಕ್ಷಿಯ

ಧರಿಸದವರ, । ನಿತ್ಯಲಿಂಗಾರ್ಚನೆಯ ಮಾಡದವರ, । ಜಂಗಮವೇ ಲಿಂಗವೆಂದರಿ
ಯದವರ, । ಸದ್ಭಕ್ತರ ಸಂಗದಲ್ಲಿರದವರ ತೋರದಿರು. । ಕೂಡಲಸಂಗಮದೇವಾ,
ಸೆರಗೊಡ್ಡಿ ಬೇಡುವೆನು. [ ೪೫೩ ] ಕೂಪವರಿಗೆ ಹೇಳುವೆನು ಕುಳಸ್ಥಳಂಗಳನೆಲ್ಲ
ವ, । ಕೂರದವರಿಗೆ ಹೇಳಿ ನಾನೇವೆನು ಶಿವನೆ । ಕರಲ ಭೂಮಿಯಲ್ಲಿ ಕರೆದ
ವ್ಯಾಯ ತೆರನಂತೆ । ಅವರೆತ್ತ ಬಲ್ಲರೆನ್ನ ಸುಖ-ದುಃಖವನು । ಅಂಗ
ತವಿಲ್ಲದ ಸಂಗವು ಅಳಲಿಲ್ಲದ ಹುಯ್ಯಲಂತ, । ಇದು ಕಾರಣ,
ಕೂಡಲಸಂಗಮದೇವಾ, । ನಿಮ್ಮ ಶರಣರಿಗಲ್ಲದೆ ಬಾುದೆರೆಯೆನು. [ ೪೫೪ ]
ಒಡೆದೋಡು ಎನ್ನ ಮನೆಯಲಿಲ್ಲದಂತೆ ಮಾಡಯ್ಯಾ, । ಕೊಡು ದೇ
ವ, ಎನ್ನ ಕೈಯಲೊಂದು ಕರಿಕೆಯನು. । 'ಮೃಡದೇವಾ ಶರಣೆಂದು ಭಿಕ್ಷಕ್ಕೆ ಹೋ
ದಡೆ । ಅಲ್ಲಿ, 'ನಡೆ ದೇವಾ' ಎಂದೆನಿಸು ಕೂಡಲಸಂಗಮದೇವಾ. [ ೪೫೫ ] ಭವಿರ
ಹಿತ ಭಕ್ತನಾದ ಬಳಿಕ, । ಭಕ್ತಿಭಾಜನದಲ್ಲಿ ಮಾಡಿ ಭವಿಗಿಕ್ಕಲಾಗದಯ್ಯಾ.

ಯುಕ್ತಿಶೂನ್ಯರಿಗೆ ಮುಂದೆ ಪ್ರಸಾದ ದೂರ, । ಮುಕ್ತಿಲ್ಲ–ಮುಂದೆ ನಾಯ ಬಸುರಲ್ಲಿ
ಬಪ್ಪುದು ತಪ್ಪದು ಪೃಥ್ವಿಯೊಳಗೆ. । ಕೂಡಲಸಂಗಮದೇವಾ, ನಿಮ್ಮ ಶರಣರಿಗಲ್ಲ
ದೆ । ಅನಾಚಾರಕ್ಕೆಲ್ಲಿಯದೊ [ ೪೫೬ ] ॥ ಭಕ್ತನ ಪ್ರಸಾದಿಸ್ಥಲ ॥ ಅಯ್ಯಾ, ನಿಮ್ಮ ಶರಣರ ದಾ
ಸೋಹಕ್ಕೆ । ತನುಮನಧನವಲಸದಂತೆ ಮಾಡಯ್ಯಾ, । ತನು ದಾಸೋಹಕ್ಕೆ ಉ
ಬ್ಬುವಂತೆ ಮಾಡಯ್ಯಾ, । ಮನ ದಾಸೋಹಕ್ಕೆ ಲೀಯವಹಂತೆ ಮಾಡು,
ಧನ ದಾಸೋಹಕ್ಕೆ ಸವೆದು ನಿಮ್ಮ ಶರಣರ ಪ್ರಸಾದದಲ್ಲಿ । ನಿರಂತರ ಆ
ಡಿ, ಹಾಡಿ, ನೋಡಿ, ಕೂಡಿ, ಭಾವಿಸಿ, ಸುಖಿಸಿ, । ಪರಿಣಾಮಿಸುವಂತೆ ಮಾ
ಡು ಕೂಡಲಸಂಗಮದೇವಾ. [ ೪೫೭ ] ಹಾರುವ ಹಾರುವನಪ್ಪೆ ನಾನು, ಸದ್ಭ
ಕ್ತರೆನ್ನವರೆನ್ನವರೆಂದು । ಹಾರು[ವೆ] ಹಾರುವೆನವ್ವಾ ನಾನು, ಶರಣರು ಎನ್ನವ
ರೆನ್ನವರೆನ್ನವರೆಂದು, । ಕೂಡಲಸಂಗನ ಶರಣರು ಒಕ್ಕುದನಿಕ್ಕಿ ಸಲಹುವರೆಂದು
[ ೪೫೮ ] ಒಕ್ಕುದ ಮಿಕ್ಕುದನುಂಡು ಕಿವಿಕಿವಿದಾಡುವೆ. । ಶರಣರ ಮನೆಯ ಲೆಂಗಿ

ಯ ಡಿಂಗರಿಗ ನಾನು, । ಕೂಡಲಸಂಗನ ಶರಣರ ಮನೆಯ । ಭಕ್ತಿಯ ಮರುಳ ನಾನು. [ ೪೫೯ ] ಗುರು ಲಿಂಗ ಜಂಗಮದಿಂದ ಪಾದೋದಕ ಪ್ರಸಾದವಾುತ್ತು. । ಆ ಭಾವವೆ ಮಹಾಪ್ರಸಾದವಾಗಿ । ಎನಗೆ ಬೇರೆ ಪ್ರಸಾದವೆಂಬುದಿಲ್ಲ । ಕೂಡಲಸಂಗಮದೇವಾ. [ ೪೬೦ ]

ಅಹುದೆಂದರಿಯೆ, ಆಗದೆಂದರಿಯೆ, । ಆದಿಪಥವ ತೋರಲರಿಯೆ, । ಸತ್ಯವನರಿಯೆ, ಸಹಜವನರಿಯೆ, । ಸಜ್ಜನ ಶುದ್ಧವ ಮುನ್ನರಿಯೆ. । ನಿಮ್ಮ ಶರಣರ ಒಕ್ಕುದನುಂಡಿಪ್ಪೆ । ಕೂಡಲಸಂಗಮದೇವಾ. [ ೪೬೧ ]

ಆವನಾದಡೇನು ಶ್ರೀಮಹಾದೇವನ ನೆನೆವನ । ಬಾಯ ತಂಬುಲವ ಮೆಲುವೆ, ಬೀಳುಡೆಯ ಹೊದೆವೆ, । ಪಾದರಕ್ಷೆಯ ಕಾಯ್ದು ಬದುಕುವೆ, । ಕೂಡಲಸಂಗಮದೇವಾ. [ ೪೬೨ ] ಒಂದುವನರಿಯದ ಸಂದೇಹಿ ನಾನಯ್ಯಾ, । ನಂಬುಗೆಲ್ಲದ ಡಂಬಕ ನಾನಯ್ಯಾ. । ನಿಮ್ಮ ನಂಬಿದ ಶರಣರ ಡಿಂಗರಿಗ ನಾನು, । ಕೂಡಲಸಂಗಮ
೧೫೨ ದೇವಾ. [ ೪೬೩ ] ಬಿಡದೆ ಬಾಗಿಲ ಎಂಜಲ ಕಾಪ್ಪೆನು, ಕಿಂಕರನು. । ಕಿಂಕರ

ವರ ಮನೆಯಲ್ಲಿ ಕಿಂಕಿಲವನು ಆನು ಹಾರುತ್ತಿಪ್ಪೆನು, । ನಮ್ಮ ಕೂಡಲಸಂಗನ ಶರಣರ । ಒಕ್ಕು
ದ ಮಿಕ್ಕುದನುಂಬ ಕಿಂಕರ ನಾನು. [ ೪೬೪ ] ತೊತ್ತಿಂಗೇಕೆ ಲಕ್ಷಣ? ಬಂಟಂಗೇಕೆ ಆಚಾರ? । ಆಗ
ಮವೇಕೆ ಡಿಂಗರಿಗಂಗೆ? । ಒಕ್ಕುದನುಂಬುವಂಗಯ್ಯಾ, ಕೂಡಲಸಂಗಮದೇವಾ । ನಿಮ್ಮ ನಂಬುವು
ದಾಚಾರವಯ್ಯಾ. [ ೪೬೫ ] ತೊತ್ತಿಂಗೆ ಲಕ್ಷಣವೇಕಯ್ಯಾ । ಅವರೊಕ್ಕುದನುಂಡು ಮಿಕ್ಕು
ದ ಕಾದ್ದುಪ್ಪುದು. । ಸಾರೆ ಹೊರಸೇಕೆ, ಅವಳಿಗೆ ಮಾರುತ್ತರವೇಕೆ । ಕೂಡಲ
ಸಂಗನ ಶರಣರೊಡನೆ । ಇದಿರುತ್ತರವೇಕೆ ಸಿಂಬಕಂಗೆ? [ ೪೬೬ ] ಪಾದೋ
ದಕವ ಕೊಂಬೆ, ಪ್ರಸಾದವ ಕೊಂಬೆ, । ಅರ್ಥಪ್ರಾಣಾಭಿಮಾನ ನಿಮ್ಮದೆಂಬೆ. । ರಾತ್ರಿ
ಯಲೊತ್ತೆಯ ಕೊಂಬ ಪಾತಕ ಸೂಳೆಯಂತೆ, । ಬರಿ ಮಾತಿಂಗೊಲೆವನೆ ನ
ಮ್ಮ ಕೂಡಲಸಂಗಮದೇವ [ ೪೬೭ ] ಪಾತಕ ಮಹಾಪಾತಕವ ಮಾಡಿದವನು । ಸದ್ಭಕ್ತರ ಮ
ನೆಗೆ ಹೋಗಿ, । ಅವರೊಕ್ಕ ಪ್ರಸಾದವನಾಯ್ದುಂಡಡೆ, । ಸಕಲ ಬ್ರಹ್ಮಹತ್ಯಾದಿ ಪಾತಕ ಪರಿ
ಹಾರ. । ಒಮ್ಮೆ ಬೇಡಿಕೊಂಡುಂಡಡೆ ! ಪಾತಕೇ ಸಮನುಪ್ರಾಪ್ತೇ ಶಿವಭಕ್ತಗೃಹಂ ವ್ರ
೧೫೩ ಜೇತ್ । ಯಾಚಯೇದನ್ನಮಮೃತಂ ತದಲಾಭೇ ಜಲಂ ಪಿಬೇತ್ । ಇದು ಕಾರ

ಣ ಕೂಡಲಸಂಗಮದೇವಾ, । ನಿಮ್ಮ ಸದ್ಭಕ್ತರಿಗೆ ನಮೋ ನಮೋ ಎಂಬೆನು. [ ೪೧೮ ] ನಾನು ಹೊತ್ತ ಹುಳ್ಳಿಯನಂಬಲಿಗೆ ಕೊಂಬುವರಿಲ್ಲ ನೋಡಯ್ಯಾ । ಆನು ನಿಮ್ಮ ಶರಣರ ಒಕ್ಕುದನುಂಡು ಬದುಕುವೆನಯ್ಯಾ । ಮೇರುವ ಸಾರಿದ ಕಾಗೆ ಹೊಂಬಣ್ಣವಪ್ಪದು ತಪ್ಪದು । ಕೂಡಲಸಂಗಮದೇವಾ. [ ೪೧೯ ]ಭವಭವದಲ್ಲಿ ನಿಮ್ಮ ಜಂಗಮವೆ ಶರಣಯ್ಯಾ । ಅವರುಂಡು ಮಿಕ್ಕುದ ಉಡುಗಿ, । ಒಕ್ಕಪ್ರಸಾದವನಾಯ್ದುಕೊಂಬ ಮರುಳ ನಾನಯ್ಯಾ । ನಮ್ಮ ಕೂಡಲಸಂಗನ ಶರಣರ ರಿಣವ ನಾಹಿಂಗಲಾರೆ. [ ೪೨೦ ] ದಾಸಿಯ ವರ್ಗದಲ್ಲಿಪ್ಪೆನು ಶಿವಶರಣರ ಮನೆಯಲ್ಲಿ. । ಅವರೊಕ್ಕುದನುಂಡು, ಮಿಕ್ಕುದ ಕಾಯ್ದುಕೊಂಡಿಪ್ಪ ಕಾರಣ । ಕಾಲ ಮುಟ್ಟಲಮ್ಮನು, ಕಲ್ಪಿತ ತೊಡೆತ್ತು. । ಭವಬಂಧನ ಹಿಂಗಿತ್ತು, ಕರ್ಮ ನಿರ್ಮಳವಾಗಿತ್ತು. । ಅವರ ತೊತ್ತಿನ ತೊತ್ತಿನ ಪಡಿದೊತ್ತಿನ ಮಗನೆಂದು । ಕೂಡಲಸಂಗಮದೇವನು 'ಇತ್ತ ಬಾ ಎಂದು ಎತ್ತಿಕೊಂಡನು. [ ೪೨೧ ] ಜನ್ಮ ಜನ್ಮಕ್ಕೆ ಹೊಗಲೀಯ

ದೆ, । ಸೋಽಹಂ ಎಂದೆನಿಸದೆ ದಾಸೋಽಹಂ ಎಂದೆನಿಸಯ್ಯಾ । ಲಿಂಗಜಂಗಮದ
ಪ್ರಸಾದವ ತೋರಿ ಬದುಕಿಸಯ್ಯಾ । ಕೂಡಲಸಂಗಮದೇವಾ. [ ೪೭೨ ] ಕರ್ತರು ನಿಮ್ಮ
ಗಣಂಗಳು ಎನ್ನ ತೊತ್ತುಮಾಡಿ ಸಲಹಿದ ಸುಖವು । ಸಾಲೋಕ್ಯ, ಸಾಮಿಪ್ಯ, ಸಾ
ರೂಪ್ಯ, ಸಾಯುಜ್ಯದಂತುಟಲ್ಲ_ । ಕೇಳಯ್ಯಾ, ಕೂಡಲಸಂಗನ ಶರಣರು
ತಮ್ಮ ಒಕ್ಕುದನಿಕ್ಕಿ ಸಲಹಿದ ಸುಖವು. [ ೪೭೩] ॥ ಭಕ್ತನ ಪ್ರಾಣಲಿಂಗಿಸ್ಥ
ಲ ॥ ತೊತ್ತಿಂಗೆ ಬಲ್ಲಹನೊಲಿದಡೆ ಪದವಿಯ ಮಾಡದೆ ಮಾಬ
ನೆ । ಜೇಡರ ದಾಸಯ್ಯಂಗೊಲಿದಾತ ಮತ್ತೊಬ್ಬ ದೇವನೆ, ಅಯ್ಯಾ । ಮಾ
ದಾರ ಚೆನ್ನಯ್ಯಂಗೆ, ಡೋಹರ ಕಕ್ಕಯ್ಯಂಗೆ, । ತೆಲುಗು ಜೊಮ್ಮಯ್ಯಂಗೆ ಒಲಿದಾ
ತ ಮತ್ತೊಬ್ಬ ದೇವನೆ, ಅಯ್ಯಾ । ಎನ್ನ ಮನದ ಪಂಚೇಂದ್ರಿಯ ನಿಮ್ಮತ್ತಲಾ
ದಡೆ । ತನ್ನತ್ತ ಮಾಡುವ ಕೂಡಲಸಂಗಮದೇವಯ್ಯ. [ ೪೭೪ ] ಹೊರಗೆ ಹೂ
ಸಿ ಏವೆನಯ್ಯಾ, ಒಳಗೆ ಶುದ್ಧವಿಲ್ಲದನ್ನಕ್ಕ । ಮಣಿಯ ಕಟ್ಟಿ ಏವೆ

ನಯ್ಯಾ, ಮನ ಮುಟ್ಟದನ್ನಕ್ಕ । ನೂರನೋದಿ ಏವೆನಯ್ಯಾ, । ನಮ್ಮ ಕೂಡಸಂ
ಗಮದೇವರ ಮನಮುಟ್ಟದನ್ನಕ್ಕ [ ೪೭೫ ] ಸುಚಿತ್ತದಿಂದ ನಿಮ್ಮ ನೆನೆಯಲೊಲ್ಲ
ದೆನ್ನ ಮನ, । ಎಂತಯ್ಯಾ ಎನಗಿನ್ನಾವುದು ಗತಿ । ಎಂತಯ್ಯಾ ಎನಗಿನ್ನಾವು
ದು ಮತಿ । ಎಂತಯ್ಯಾ ಹರಹರಾ, ಕೂಡಲಸಂಗಯ್ಯ
ನ । ಮನದ ಸಂತೈಸೆನ್ನ. [ ೪೭೬ ] ಅಷ್ಟದಳ ಕಮಲವ ಸುತ್ತುವ ಜೀ
ವಾತ್ಮನ । ಮೆಟ್ಟಿದ ದಳವನರಿಯದೆ, । ಆನು ಭಕ್ತನೆಂತೆಂಬೆ ! ಆನು ಶರ
ಣನೆಂತೆಂಬೆ ! । ಆನು ಲಿಂಗೈಕ್ಯನೆಂತೆಂಬೆ ಕೂಡಲಸಂಗಮದೇವಾ । ಎನ್ನ ಮನವು ಸಮಾ
ಧಾನವಾಗದನ್ನಕ್ಕ [ ೪೭೭ ] ನಾ ನಿಮ್ಮ ನೆನೆವನು, ನೀವೆನ್ನನರಿರಿ. । ನಾ
ನಿಮ್ಮನೋಲೈಸುವೆನು, ನೀವೆನ್ನ ಕಾಣಿರಿ. । ನಾ
ನೆಂತು ಬದುಕುವೆನೆಂತು ಜೀವಿಸುವೆನಯ್ಯಾ । ಕೂಡಲಸಂಗಮದೇವಾ, । ಎನಗೆ ನೀವೆ
ಪ್ರಾಣ ಗತಿ ಮತಿ, ನೋ
ಡಯ್ಯಾ. [ ೪೭೮ ] ತಂದೆ ನೀನು ತಾಯಿ ನೀನು, ಬಂಧು ನೀನು ಬಳಗ ನೀನು. ।
೧೫೬ ನೀನಲ್ಲದೆ ಮತ್ತಾರೂ ಇಲ್ಲಯ್ಯಾ, ಕೂಡಲಸಂಗಮದೇವಾ, । ಹಾಲಲದ್ದು, ನೀರಲದ್ದು. [ ೪೭೯ ]

ರೂ ಇಲ್ಲ, ಹರಹರಾ, ನೀನೆ ಕಂಡಯ್ಯಾ, ಎನ್ನ ಮಾತಾಪಿತನು ನೀನೆ ಕಂಡಯ್ಯಾ.
ಕೂಡಸಂಗಮದೇವಾ. [ ೪೮೦ ] ಎನ್ನ ಜನ್ಮವ ತೊಡೆದನೀ ಧರ್ಮಿ, । ಎನ್ನ ಜನ್ಮವನತಿ
ಗಳೆದಾ ಸಧರ್ಮಿ. । ಎನ್ನ ಭವಬಂಧನವ ನಿಃಕರಿಸಿದೆಯಾಗಿ, । ಶಿವನೆ ಗತಿಯೆಂದು ನಂಬಿದೆ
ನಯ್ಯಾ. । ಎನ್ನ ಅಷ್ಟಮದಂಗಳ ಸುಟ್ಟುರುಹಿದೆಯಾಗಿ, । ಕಟ್ಟುಗ್ರದಿಂದ ನಿಮ್ಮ
ಶ್ರೀಚರಣವ ಕಂಡೆ. । ಸ್ವೃಪ್ರತಿಪಾಲಕಾ, ನಿಮ್ಮ ನಂಬಿದೆ, । ಕರುಣಿಸು ಕೂ
ಡಲಸಂಗಮದೇವಾ [ ೪೮೧ ] ಭವರೋಗವೈದ್ಯನೆಂದು ನಾ ನಿಮ್ಮ ಮರೆ
ಹೊಕ್ಕೆ, । ಭಕ್ತಿದಾಯಕ ನೀನು ಕರುಣಿಸು ಲಿಂಗತಂದೆ. । ಜಯ ಜಯ ಶ್ರೀ
ಮಹಾದೇವ, ಜಯ ಜಯ ಶ್ರೀ ಮಹಾದೇವ, । ಜಯ ಜಯ ಶ್ರೀ ಮಹಾದೇವ ಎ
ನ್ನುತ್ತಿದ್ದಿತೆನ್ನ ಮನವು. । ಕೂಡಲಸಂಗಮದೇವಂಗೆ ಶರಣೆಂದಿತ್ತೆನ್ನ ಮನವು. [ ೪೮೨ ]
॥ ಭಕ್ತನ ಶರಣಸ್ಥಲ ॥ ಅಂಗಯ್ಯ ಒಳಗಣ ಲಿಂಗವ ನೋಡುತ್ತ, । ಕಂಗಳು
ಕಡೆಗೋಡಿವರಿಯು
೧೫೭ ತ್ತ ಸುರಿಯುತ್ತ ಎಂದಿಪ್ಪೆನೊ । ನೋಟವೆ ಪ್ರಾಣವಾಗಿ ಎಂದಿಪ್ಪೆನೊ । ಕೂಟ

